# ಕರ್ನಾಟಕ ಲೋಕಚೇತನ

ಡಿಸೆಂಬರ್ 1988
ಸಂಪುಟ 1
ಸಂಚಿಕೆ 2

ವಿತರಣೆಗೆ ಮಾತ್ರ

# ಕರ್ನಾಟಕ ಲೋಚನ

ಷಾಣ್ಮಾಸಿಕ ವಿದ್ವತ್ಪತ್ರಿಕೆ

...ೀ. ಸ್ಮಾರಕ ಪ್ರತಿಷ್ಠಾನ, ೫೪, ೩ನೇ ಅಡ್ಡಬೀದಿ, ಗವಿಪುರ ವಿಸ್ತರಣ, ಬೆಂಗಳೂರು–೧೯

ಸಂಪಾದಕ : ಪ್ರೊ॥ ವಿದ್ವಾನ್ ಟಿ. ಕೇಶವ ಭಟ್ಟ

ಸಂಚಿಕೆ ೨

...ತ ೧ ಡಿಸೆಂಬರ್ ೧೯೮೮



## ಪರಿವಿಡಿ

# Karnataka Lochana

[Half-Yearly Journal, Published by B.M.Sri. Memorial Foundation, 54, 3rd Cross, Gavipuram Extn, Bangalore-19]

*Chairman, Editorial Board:* Prof. M. V. Seetha Ramiah

*Editor:* Prof. (Vidwan) T. Keshava Bhat

*Vol. 1* *December 1988* *No. 2*

## CONTENTS

ಯಗಟಿ ಗ್ರಾಮದ
ವೀರನಾರಾಯಣನ ವಿಗ್ರಹ
(ನೋಡಿ: ಪು. 108–109)

# ಹಳೇಬೀಡು ಕೈಫಿಯತ್ತು




—ಸಂ : ವೈ. ಸಿ. ಭಾನುಮತಿ

## ಹಿನ್ನೆಲೆ

ಈ ಕೈಫಿಯತ್ತಿನ ಕರ್ತೃ ಕಾಲಗಳೇನೂ ತಿಳಿದುಬರುವುದಿಲ್ಲ. ಕಾಲಕ್ಕೆ ಸಂಬಂಧಿಸಿದಂತೆ ಕೃತಿಯಲ್ಲಿ ದೊರೆಯುವ ಆಂತರಿಕ ಆಧಾರಗಳಿಂದ ಕೆಲವೊಂದು ಊಹೆಗೆ ಅವಕಾಶವಿದೆ. ಕೈಫಿಯತ್ತಿನ ಕಡೆಯಲ್ಲಿ ಮೈಸೂರು ಅರಸರ ಉಲ್ಲೇಖ ವಿರುವುದರಿಂದ ಇದು ಮೈಸೂರು ಅರಸರ ಕಾಲಕ್ಕೆ ಸೇರಿದ್ದೆಂಬುದು ಸ್ಪಷ್ಟ. ಅಂತೆಯೆ ಇಲ್ಲಿನ ಭಾಷೆ ಶೈಲಿಗಳನ್ನು ಗಮನಿಸಿದಾಗ ಇದು ಕ್ರಿ.ಶ. 1800ಕ್ಕಿಂತ ಹಿಂದಕ್ಕೆ ಖಂಡಿತವಾಗಿಯೂ ಹೋಗುವುದಿಲ್ಲ. ಸದ್ಯದಲ್ಲಿ ಹಳೇಬೀಡು ಕೈಫಿಯತ್ತಿನ ಕಾಲವನ್ನು ಕ್ರಿ.ಶ. 1850 ಎಂದು ಸ್ವೀಕರಿಸಬಹುದು.

ಪ್ರಸ್ತುತ ಕೈಫಿಯತ್ತಿನಲ್ಲಿ ಹೊಯ್ಸಳರ ಚರಿತ್ರೆ ಪ್ರಧಾನವಾಗಿದೆ. ಇಲ್ಲಿ ಉಕ್ತವಾಗಿರುವ ಅಂಶಗಳು ಎಷ್ಟರಮಟ್ಟಿಗೆ ತಥ್ಯ ಎಂಬುದು ಇತರ ಆಕರಗಳೊಡನೆ ಪರಿಶೀಲನಾರ್ಹ. ದ್ವಾರಕೆಯ ರಾಜ ಮಧುಸೂದನ ದಕ್ಷಿಣಕ್ಕೆ ಯಾತ್ರೆ ಬಂದು ಈಗಿನ ಹಳೇಬೀಡು ಇರುವ ಸ್ಥಳದಲ್ಲಿ ತಂಗುತ್ತಾನೆ. ಇದೇ ಸ್ಥಳದಲ್ಲಿ ಪಟ್ಟಣ ಕಟ್ಟಬೇಕೆಂದು ಪುಷ್ಪಗಿರಿ ಮಲ್ಲಿಕಾರ್ಜುನ ದೇವರು ಮಧುಸೂದನನಿಗೆ ಕನಸಿನಲ್ಲಿ ಬಂದು ಸೂಚಿಸುತ್ತಾರೆ. ಅದರಂತೆ ಆತ ಪಟ್ಟಣ ಕಟ್ಟಿ ತಮ್ಮ ಊರಿನ ಹೆಸರೂ ಉಳಿಯುವಂತೆ ದ್ವಾರಾಪುರಿ ಎಂದು ನಾಮಕರಣ ಮಾಡುತ್ತಾನೆ. ಹೀಗೆ ಹೊಯ್ಸಳರು ಯದುವಂಶೀಯರೆಂದು ಇಲ್ಲಿ ಪ್ರತಿಪಾದಿಸಲಾಗಿದೆ. ಮಧುಸೂದನನ ವೃತ್ತಾಂತದಿಂದ ಆರಂಭವಾದ ಈ ಕೈಫಿಯತ್ತಿನಲ್ಲಿ ಮುಂದೆ ಐತಿಹಾಸಿಕ ಅಂಶಗಳು ಗೌಣವಾಗಿ ಪೌರಾಣಿಕ ಹಾಗೂ ಜಾನಪದೀಯ ಅಂಶಗಳು ಮೇಲುಗೈ ಪಡೆಯುತ್ತವೆ. ಸಳನ ಕಥೆ, ಸಿದ್ಧರಸದಿಂದ ಕಬ್ಬಿಣವನ್ನು ಚಿನ್ನ ಮಾಡುವುದು, ವಿಷ್ಣುವರ್ಧನನ ಮಗಳ ರೋಗವನ್ನು ರಾಮಾನುಜಾಚಾರ್ಯರು ಗುಣಪಡಿಸುವುದು, ಬಾದಷಹನ ಮಗಳು ಬಲ್ಲಾಳನ ಪ್ರೀತಿಗಾಗಿ ಹಾತೊರೆಯುವುದು, ಲಕ್ಕಣ್ಣ ವೀರಣ್ಣರ ಕಥೆ, ಋಷ್ಯಶೃಂಗನ ಶಾಪ ಮೊದಲಾದ ಸಂಗತಿಗಳು ಹೆಚ್ಚಿನ ಭಾಗವನ್ನು ಆಕ್ರಮಿಸಿವೆ. ಕ್ರಿ.ಶ. 978ರ ಚಾವುಂಡರಾಯ ಪುರಾಣದಲ್ಲಿಯೆ 'ಪೊಯಿಸಳನೆಂಬ ಬಿರುದನುಮಂ' ಎಂಬ ಉಲ್ಲೇಖ ದೊರೆಯುತ್ತದೆ. ಸಿದ್ಧರಸದಿಂದ ಚಿನ್ನ ಮಾಡುವುದು ಒಂದು ಆಶಯವಾಗಿ ಬೆಟ್ಟದಕೋಟೆ ಕೈಫಿಯತ್ತಿನಲ್ಲಿ ಎಡೆಪಡೆದಿದೆ. ಲಕ್ಕಣ್ಣ ವೀರಣ್ಣರ ಪ್ರಸಂಗ ಕೂಡ ಜನಪದ ಕಥಾಶಯವಾಗಿ ವಿಪುಲವಾಗಿ ಬೆಳೆದಿದೆ.

ಹೊಯ್ಸಳರ ಮೊದಲ ದೊರೆ ವಿನಯಾದಿತ್ಯನ ಉಲ್ಲೇಖ ಕೈಫಿಯತ್ತಿನಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಎರೆಯಂಗನನ್ನು ಅಂಗನೃಪಾಲ ಎಂದು ಕರೆದಿದೆ. ಹೊಯ್ಸಳರ ತರುವಾಯದ ಹಳೇಬೀಡಿನ ಚರಿತ್ರೆಯನ್ನು ತೇಲಿಸಿ ಕೊಂಡು ಹೋಗಿದೆ. ಹೀಗಾಗಿ ಹಳೇಬೀಡಿನ ಕೈಫಿಯತ್ತನ್ನು ಇತಿಹಾಸದ ದೃಷ್ಟಿ ಯಿಂದ ನೋಡಿದಾಗ ಸ್ವಲ್ಪಮಟ್ಟಿನ ನಿರಾಶೆಯೇ ಉಂಟಾಗುತ್ತದೆ. ಇಂದು ಹೊಯ್ಸಳರ ಚರಿತ್ರೆ ಹಳೇಬೀಡು ಕೈಫಿಯತ್ತಿಗಿಂತ ಸಾವಿರಪಟ್ಟು ಬೆಳೆದಿದೆ. ಆದರೆ ಅಂದಿನ ಜನಮನದಲ್ಲಿ ಹಳೇಬೀಡಿನ ಬಗ್ಗೆ ಯಾವ ಕಲ್ಪನೆಗಳೇನಿದ್ದವು, ಅಭಿಪ್ರಾಯಗಳೇನಿದ್ದವು ಎಂಬುದನ್ನು ತಿಳಿಯುವಲ್ಲಿ ಈ ಕೈಫಿಯತ್ತು ಸಹಾಯಕ್ಕೆ ಬರುತ್ತದೆ.

ಹಳೇಬೀಡಿನ ಕೈಫಿಯತ್ತನ್ನು ಬೇಲೂರಿನ ವೇದಾಂತ ಅಯ್ಯಂಗಾರ್ ಎಂಬವರ ಮನೆಯಲ್ಲಿದ್ದ ಕಾಗದದ ಹಸ್ತಪ್ರತಿಯ ಸಹಾಯದಿಂದ ಸಂಪಾದಿಸಿದೆ.

### ಹಳೇಬೀಡು ಕೈಫಿಯತ್ತು

ನಮಸ್ತುಂಗಶಿರಶ್ಚುಂಬಿ ಚಂದ್ರಚಾಮರ ಚಾರವೇ
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ
ಹೊಯ್ಸಳೋರ್ವೀಶವಂಶಾಯ ಸ್ವಸ್ತಿವೈರಿಭೃತಾಂ ಪುರ
ಖಂಡನೇ ತನ್ಮಂಡಲಾಗ್ರಾಮ....ರ ಕಥಾರಾಗ್ರಜನ್ಮನೇ

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷಂಗಳು ೧೦೫೫ನೇ ವರ್ತಮಾನಕ್ಕೆ ಸಲುವ ಪ್ರಮಾದೀಚನಾಮ ಸಂವತ್ಸರದ ಮಾರ್ಗಶಿರ ಶು ೧೦ ಲ್ಲು ನಾ ವಿಷ್ಣು ಪೃಥ್ವೀಪತಿಯೆಂಬ ವಚನಪ್ರಕಾರ ವಿಷ್ಣುವರ್ಧನ ರಾಯನು ಈ ದ್ವಾರಾಪುರಿಯೆಂಬ ಪಟ್ಣವನ್ನು ಸತ್ಯಸಂಧನಾಗಿ ರಾಜ್ಯಂಗೆಯ್ಯುತ್ತಿರಲಾಗಿ ಈ ವಿಷ್ಣುವರ್ಧನರಾಯನ ಅನ್ವಯ ಸಂತತ ವೃತ್ತಾಂತವೇನೆಂತೆಂದರೆ ಪೂರ್ವದಲ್ಲಿ ಯದುವಂಶದಲ್ಲಿ ಉತ್ಪನ್ನನಾದಂಥ ಯಾದವರು ಒಬ್ಬನಿಗೆ ಸ್ತ್ರೀವೇಷವನ್ನು ಹಾಕಿ ಅಲ್ಲಿ ತಪಸ್ಸು ಮಾಡುವ ಋಷಿಗಳ ಸಮಿಾಪಕ್ಕೆ ಬಂದು ದೀರ್ಘನಮಸ್ಕಾರವನ್ನೇ ಮಾಡಿ ಕೇಳುತ್ತಾರೆ ಏ ಋಷಿಗಳಿರಾಂತ ಹೇಳಿ ತಮ್ಮ ಸಂಗಡ ಕರೆದುಕೊಂಡು ಬಂದಂಥ ಪುರುಷಸ್ತ್ರೀಯನ್ನು ಎದುರಿಗೆ ನಿಲ್ಲಿಸಿ ಸ್ವಾಮಿ ಈ ಸ್ತ್ರೀಯು ಎಂಥಾ ಮಗುವ ಪ್ರಸುವಾಗುತ್ತಾಳೆ ಎಂಬದಾಗಿ ಕೇಳಿದರು ಅದಕ್ಕೆ ಅವರು ಜ್ಞಾನದೃಷ್ಟಿ ಯಿಂದ ನೋಡಿ ಇವರುಗಳು ತಮ್ಮ ಸಂಗಡ ಕುಚೇಷ್ಟೆಗೆ ಕೇಳುತ್ತಾರೆ ಎಂದು ತಿಳಿದು ಮಹಾ ಕೋಪಿಷ್ಠರಾಗಿ ನಿಮ್ಮ ಕುಲ ಸಂಹಾರ ಮಾಡುವಂಥಾದೊಂದು ಮುಸಲಾಯುಧ ಹುಟ್ಟುತ್ತಾಯಿದೆ ಎಂಬದಾಗಿ ಹೇಳಿದರಿಂದ ಅದೇ ಪ್ರಕಾರ ಆ ಸ್ತ್ರೀಯನ್ನು ಸ್ವಾಮಿಯ ಬಳಿಗೆ ಕರೆತಂದು ನಿಲ್ಲಿಸ್ತರು ಆ ಕ್ಷಣದಲ್ಲಿಯೇ ಒಂದು ಮುಸಲ ಉತ್ಪತ್ತಿಯಾಯ್ತು ಅದ ಕಂಡು ಭಯಪಟ್ಟು ಉಗ್ರಸೇನನಾದ

ದೊರೆಯು ಬಳಿಗೆ ಬಂದು ತಾವು ಋಷಿಗಳ ಬಳಿಗೆ ಹೋಗಿ ತಾವು ಮಾಡಿದಂಥ ಅಪಕೃತ್ಯ ಅಪಹಾಸ್ಯ ಇವುಗಳೆಲ್ಲ ಹೇಳಿದರಿಂದ ಆ ಉಗ್ರಸೇನನು ನೋಡಿ ನಮ್ಮ ಯಾದವ ಕುಲಕ್ಕೆ ಮೃತ್ಯುವಾದ ಮುಸಲವನ್ನು ಅದ ಚೆನ್ನಾಗಿ ಸಣ್ಣಗೆ ಉಜ್ಜಿಸಿ ಆ ಹುಡಿಯಾದ ಪುಡಿಗಳನ್ನು ಸಮುದ್ರದೊಳು ಹಾಕಬೇಕಂತ ಹೇಳಿದ ಕಾರಣ ಅದೇ ಪ್ರಕಾರ ಮುಸಲವನ್ನು ತೀಡಿಸಿ ಆ ಹುಡಿಗಳನ್ನೇ ಸಮುದ್ರ ಮಧ್ಯದೊಳು ಹಾಕಿಬಿಟ್ಟರು ಅದರೊಳಗೆ ಒಂದು ಹೆಬ್ಬೆಟ್ಟು ಪ್ರಮಾಣ ಮಾತ್ರ ಕೊಯ್ಯುವದಕ್ಕೆ ಆಗದೆ ಸಮುದ್ರದಲ್ಲಿ ಹಾಗೆ ಹಾಕಿಬಿಟ್ಟರು ಆ ಉಕ್ಕಿನ ಹುಡಿ ಎಲ್ಲವೂ ಸಮುದ್ರ ದಡದಲ್ಲಿ ಗೇಕು ಆಗಿ ಹುಟ್ಟಿತು ಈ ವೃತ್ತಾಂತ ಯಾವತ್ತನ್ನು ಶ್ರೀಕೃಷ್ಣಸ್ವಾಮಿಯವರು ತಿಳಿದಂಥಾವರಾಗಿ ಇವರು ದ್ವಾರಕೆಯಲ್ಲಿ ಮೃತವಾದರೆ ಸದ್ಯ ಮುಕ್ತಿಯಾಗುತ್ತಾರೆ ಆದ್ದರಿಂದ ಇವರೆಲ್ಲರು ಮುಕ್ತಿಯಾಗಬಾರದೆಂದು ತಿಳಿದು ಸಮಸ್ತ ಯಾದವರನ್ನು ಕರೆದುಕೊಂಡು ಪ್ರಭಾಸಕ್ಷೇತ್ರಕ್ಕೆ ಹೋದನು ಅಲ್ಲಿ ಸಮಸ್ತ ಯಾದವರು ಮಧುಪಾನವನ್ನು ಮಾಡಿಕೊಂಡು ಮದೋನ್ಮತ್ತರಾಗಿ ತಮ್ಮ ತಮ್ಮೊಳಗೆ ಮದನಿಸಿ ಅಲ್ಲಿ ಹುಟ್ಟಿರುವ ಗೇಕುಗಳ ಕಿತ್ತುಕೊಂಡು ಹೊಡೆದಾಡಿ ಸಮಸ್ತರು ಹತವಾದರು ವಜ್ರನೆಂಬ ಯಾದವ ಮಾತ್ರ ಉಳಿದಂಥವನಾಗಿ ಅರ್ಜುನನಿಂದ ಇಂದ್ರಪ್ರಸ್ಥದ ಪಟ್ಟಾಭಿಷೇಕವ ಮಾಡಿಸಿಕೊಂಡು ಬಹುಕಾಲ ವಂಶ ಪಾರಂಪರೆಯಾಗಿ ಇರುತ್ತ ಇದ್ದಲ್ಲಿ ಶಾಲಿವಾಹನ ಶಕ ವರುಷಂಗಳು ಎಂಟುನೂರ ತೊಂಬತ್ತಕ್ಕೆ ಸಲುವ ಪೈಂಗಳದ ವರೆಗೆ ಇಂದ್ರಪ್ರಸ್ಥವನ್ನೇ ಆಳಿಕೊಂಡು ಇರುತ್ತಾ ಇದ್ದರು ಆದ್ದರಿಂದ ಮಧುಸೂದನನೆಂಬ ರಾಯ ಒಬ್ಬನು ತಾನು ರಾಮೇಶ್ವರ ಯಾತ್ರಾ ನಿಮಿತ್ಯವಾಗಿ ದಕ್ಷಿಣ ದೇಶಕ್ಕೆ ಈ ಸ್ಥಳಕ್ಕೆ ಬಂದು ಮಾರ್ಗಸ್ತನಾಗಿ ಒಪ್ಪತ್ತು ನಿಂತದ್ದರಿಂದ ಆ ರಾತ್ರೆಯಲ್ಲಿ ಮಧುಸೂದನರಾಯನಿಗೆ ಈ ಸ್ಥಳದಲ್ಲಿ ನೀನು ಪಟ್ಟಣವನ್ನು ಕಟ್ಟಿಕೊಂಡುಯಿರು ಎಂಬದಾಗಿ ಪುಷ್ಪಗಿರಿ ಮಲ್ಲಿಕಾರ್ಜುನ ಸ್ವಾಮಿಯು ಸ್ವಪ್ನದಲ್ಲಿ ಪ್ರತ್ಯಕ್ಷನಾಗಿ ಬಂದು ಅಪ್ಪಣೆ ಕೊಟ್ಟದ್ದರಿಂದ ಆ ರಾಯನು ಈ ಪಟ್ಟಣವನ್ನು ನಿರ್ಮಾಣ ಮಾಡ್ಸಿ ತಮ್ಮ ಪಟ್ಟಣ ದ್ವಾರಾವತಿಯಾದ್ದರಿಂದ ಇದಕ್ಕೂ ದ್ವಾರಾಪುರಿಯೆಂಬ ನಾಮಧೇಯವನಿಟ್ಟು ಸುತ್ತು ಒಂದು ಹರಿದಾರಿ ಕೋಟೆ ಕಟ್ಟಿ ಆ ರಾಜ್ಯವನಾಳುತ್ತಯಿರಲಾಗಿ ಸುತ್ತ ಹತ್ತು ಯೋಜನ ಸೀಮೆ ಸಾಧಿಸಿಕೊಂಡು ಮುಂದಿ ಮಾರ್ಬಲನೊಡನೆ ಶಾಲಿವಾಹನ ಶಕ ವರುಷಂಗಳು ೯೨೦ಕ್ಕೆ ಸಲುವ ಸರ್ವಜಿತು ಸಂವತ್ಸರದ ಪರಿಯಂತ ಇದ್ದಲ್ಲಿ ಮಧ್ಯೆ ಒಂದಾನೊಂದು ದಿವಸ ಋಷ್ಯಶೃಂಗಮುನಿಯು ಈ ಪಟ್ಟಣಕ್ಕೆ ಈ ಅರಸಿನ ಆಸ್ಥಾನಕ್ಕೆ ಬರಲಾಗಿ ಈ ದೊರೆಯು ರಾಜ್ಯಮದದಿಂದ ಈ ಋಷಿಯನ್ನು ನೋಡಿದಾಗ್ಯು ಪ್ರತ್ಯಸ್ಥಾನವನ್ನು ಮಾಡದ ಕಾರಣ ಆ ಋಷಿಯು ಮಹಾಕೋಪದಿಂದ ನಿನ್ನ ರಾಜ್ಯ ಕೋಶ ಐಶ್ವರ್ಯವು ನಾಶವಾಗಲಿಯೆಂದು ಶಾಪವ ಕೊಟ್ಟು ಹೋದ ಕಾರಣ ಈತನ ರಾಜ್ಯ ಕೋಶ ಈ ಪಟ್ಟಣ ಸಹ ಕ್ಷಯವಾಗಿ ಹೋಯಿತ್ತು ಆತನು ಸ್ವರ್ಗಸ್ಥ

ನಾದನು ಈಚೆಗೆ ಶಾಲಿವಾಹನ ಶಕವರುಷ ೯೮೫ ವರ್ಷಕ್ಕೆ ಸಲುವ ಶೋಭಕೃತು ಸಂವತ್ಸರಕ್ಕೆ ಸದರಿ ಪಟ್ಟಣ ನಾಶವಾಗಿ ಅರಣ್ಯವಾಗಿತ್ತು ಈಚೆಗೆ ಆ ವಂಶಸ್ಥ ನಾದ ಸಳನೆಂಬವನು ಉತ್ತರ ದೇಶದಲ್ಲಿ ಇದ್ದಂಥಾವನು ಏಕಾಕಿಯಾಗಿ ಪಶ್ಚಿಮ ದೇಶಕ್ಕೆ ಬರುತ್ತಾ ಇದ್ದಲ್ಲಿ ಈ ದ್ವಾರಾಪುರಿ ಎಂಬ ಪಟ್ಟಣಕ್ಕೆ ಪಶ್ಚಿಮ ದಿಕ್ಕಿನಲ್ಲಿ ಎರಡು ಯೋಜನದಲ್ಲಿ ಹೇಮಾವತಿ ಎಂಬುದೊಂದು ಮಹಾಪುಣ್ಯನದಿಯುಂಟು ಆ ನದಿಯ ಪಶ್ಚಿಮದಿಕ್ಕಿನಲ್ಲಿ ಶಶಕಪುರ ಎಂಬುದೊಂದು ಗ್ರಾಮವುಂಟು ಆ ಗ್ರಾಮಕ್ಕೆ ಈ ಸಳನು ಬಂದಂಥವನಾಗಿ ಅಲ್ಲಿ ಇರಲು ಆ ಶಶಕಪುರದಲ್ಲಿ ವಾಸಂತಿಕಾ ದೇವಿಯೆಂಬ ದೇವತೆಯುಂಟು ಆ ದೇವತೆಯ ಸಮೀಪದಲ್ಲಿ ಒಬ್ಬ ಜೈನಮುನಿಯು ತಪಸ್ಸು ಮಾಡಿ ಆ ದೇವತೆಯ ಆರಾಧಿಸಿಕೊಂಡು ಇರುತ್ತಾ ಇದ್ದಲ್ಲಿ ಈ ಸಳನು ಈ ವಾಸಂತಿಕಾದೇವಿಯವರ ದರುಶನಕ್ಕೆ ಬಂದಂಥಾವನು ಈ ಮುನಿಯಂ ಕಂಡು ತಾನು ಈ ಮುನಿಯ ಸೇವಾರ್ಥದಲ್ಲಾದರು ಇರುವ ಎಂಬದಾಗಿ ಆ ಮುನಿಯ ಸಮೀಪಕ್ಕೆ ಬಂದು ವಂದನೆಯಂ ಮಾಡಲು ಆ ಮುನಿಯು ಈ ಸಳನ ದೃಢಭಕ್ತಿಗೆ ಮೆಚ್ಚಿ ನಮ್ಮ ಸೇವಾರ್ಥದಲ್ಲಿ ಇದ್ದುಕೊಂಡುಯಿರು ಎಂಬದಾಗಿ ನೇಮಿಸಿ ಈ ಸಳನ ಕೈಯಲ್ಲಿ ಒಂದು ಕುಂಚನುಂ ಕೊಟ್ಟು ಸದಾ ನಮ್ಮಲ್ಲಿ ಈ ಕುಂಚದ ಊಳಿಗವಂ ಮಾಡಿಕೊಂಡುಯಿರು ಎಂಬದಾಗಿ ಕಟ್ಳೆ ಮಾಡ್ಸಿದಲ್ಲಿ ಮಹಾಪ್ರಸಾದವೆಂದು ಒಪ್ಪಿ ಕೊಂಡು ಈ ಸೇವಾರ್ಥದಲ್ಲಿ ಇರುತ್ತ ಇದ್ದನು

ಈ ವಾಸಂತಿಕಾ ಅಮ್ಮನವರಿಗೆ ವರ್ಷಂಪ್ರತಿಯಲ್ಲಿ ಮಹಾಜಾತ್ರೆಯಾಗು ವದು ಉಂಟು ಈ ಶಶಕಪುರದಲ್ಲಿ ಒಂದು ಮಹಾ ವ್ಯಾಘ್ರಯಿದ್ದುಕೊಂಡು ಮನುಷ್ಯಸಂಚಾರಕ್ಕೆ ಅನುಕೂಲವಿಲ್ಲದೆ ಆ ಅಮ್ಮನವರಿಗೆ ಜಾತ್ರೆಯಾಗುವದೇ ದುರ್ಲಭವಾಗಿರಲಾಗಿ ಆ ದೇಶದ ಗ್ರಾಮದವರು ಮುಂತಾಗಿ ಸಮಸ್ತಜನರು ಈ ಮುನಿಯ ಸಮೀಪಕ್ಕೆ ಬಂದು ಎಲೈ ಮುನಿಶ್ರೇಷ್ಠನೆ ಇಲ್ಲಿ ಇರುವ ವ್ಯಾಘ್ರ ಭಯದಿಂವ ನಾವು ನಿರ್ವಹಿಸಲಾರೆವು ಈ ವ್ಯಾಘ್ರವನ್ನು ಯಾರು ಕೊಂದುಹಾಕು ತ್ತಾರೊ ಅವರಿಗೆ ನಮ್ಮ ರಾಜ್ಯದಲ್ಲಿ ಮನೆಗೆ ಒಂದು ಹಣವಿನ ಪ್ರಕಾರ ಕಾಲಂಪ್ರತಿ ಯಲ್ಲು ನಾವು ಕೊಡುತ್ತಯಿದ್ದೇವೆ ಎಂಬದಾಗಿ ತಮ್ಮ ಹೆಸರ ದಾನಶಾಸನವನ್ನು ಬರಕೊಟ್ಟದ್ದರಿಂದ ತಮ್ಮ ಸಮೀಪದಲ್ಲಿ ಕುಂಚದ ಊಳಿಗವನ್ನು ಮಾಡಿಕೊಂಡು ಇರುವಂಥವನ ಕರೆದು ಈ ಹುಲಿಯನ್ನು ಹೊಯಿ ಸಳಾಯೆಂದು ಈ ಸಳನಿಗೆ ನೇಮಕ ಮಾಡಲಾಗಿ ಈ ಸಳನು ಈ ಗುರುಗಳ ಕಟಾಕ್ಷದಿಂದ ತನ್ನ ಕೈಯಲ್ಲಿ ಹಿಡಿದಿರುವಂಥ ಕುಂಚದಿಂದಲೇ ಹುಲಿಯನ್ನು ಹೊಡೆದು ಕೆಡವಲಾಗಿ ಈ ಮುನಿಯು ಸಂತೋಷಪಟ್ಟಂಥವನಾಗಿ ಈ ಸಳನಿಗೆ ಹೊಯಿಸಳನೆಂಬ ನಾಮಧೇ ಯವ ಕೊಟ್ಟಂಥವರಾಗಿ ದ್ವಾರಾಪುರಿಗೆ ನೀನೇ ಅರಸು ಆಗು ಎಂಬದಾಗಿ ಆ ವಾಸಂತಿಕಾ ಅಮ್ಮನವರ ಕೈಯಿಂದ ವರವನ್ನು ಕೊಡಿಸಿಕೊಟ್ಟು ಈ ದೇಶದವರು

ಬರಕೊಟ್ಟುಯಿರುವಂಥ ದಾನಶಾಸನವನ್ನು ಕೈಯಲಿ ಕೊಟ್ಟುದನ್ನು ಮಹಾಪ್ರಸಾದವೆಂದು ತೆಗೆದುಕೊಂಡು ಅಡ್ಡೆ ಮೇಲೆ ಹುಲಿಯನ್ನು ಕಟ್ಟಿಸಿಕೊಂಡು ಗ್ರಾಮಾನುಗ್ರಾಮಗಳಲ್ಲಿ ಮನಿಗೆ ಒಂದು ಹಣವಿನ ಪ್ರಕಾರ ವರ್ತನೆಯನ್ನು ತೆಗೆದುಕೊಂಡು ಕೆಲವು ದ್ರವ್ಯವೂ ಕೈಸೇರಲಾಗಿ ಆದಕ್ಕೆ ತಕ್ಕ ಕಾಪು ಮಂದಿಯನ್ನು ಕಟ್ಟಿಕೊಂಡು ಪುನಹಾ ಮಾರನೇ ವರುಷಕ್ಕೆ ಮನಿಗೆ ಎರಡು ಹಣ ತೆಗೆದುಕೊಂಡು ಮತ್ತೂ ಕೆಲವು ಮಂದಿಯನ್ನು ಕಟ್ಟಿಕೊಂಡು ಮಾರನೇ ವರುಷಕ್ಕೆ ಮನೆ ಒಂದಕ್ಕೆ ಮೂರು ಹಣವಿನ ಪ್ರಕಾರ ತೆಗೆದುಕೊಂಡು ಮತ್ತೂ ಮಂದಿ ಕುದುರೆ ಸಂಗ್ರಹ ಮಾಡಿಸಿಕೊಂಡು ಕಾಲಪ್ರತಿಯಲ್ಲೂ ಮನಿಮನಿಗೆ ದ್ವಿಗುಣೋತ್ತರವಾಗಿ ಹಣಗಳನ್ನು ತೆಗೆದುಕೊಂಡು ಪುನಃ ಈ ಮುನಿಯ ಸಮೀಪಕ್ಕೆ ಬಂದು ತಾನು ಮಾಡಿದ ವೃತ್ತಾಂತವೆಲ್ಲವಂ ಹೇಳಿ ಮುಂದೆ ನನಿಗೆ ಏನು ಅಪ್ಪಣೆಯೆಂದು ಕೇಳಿಕೊಳ್ಳಲಾಗಿ ಆಗ ಆ ಮುನಿಯು ಎಲೈ ಹೊಯ್ಸಳನೆ ನೀನು ದ್ವಾರಾಪುರಿಗೆ ಹೋಗು ಆ ದ್ವಾರಾಪುರಿಯು ಬಹು ಜೀರ್ಣವಾಗಿದೆ ಪೂರ್ವದಲ್ಲಿಯೇ ನಿಮ್ಮ ವಂಶಸ್ಥರು ಆಳಿಕೊಂಡುಯಿದ್ದರು ಈಗ ನೀನು ಆ ದ್ವಾರಾಪುರಿಗೆ ಹೋಗಿ ನೀನು ನಿಂತಲ್ಲಿಯೆ ನಿಮ್ಮ ವಂಶಸ್ಥರು ಸ್ಥಾಪನೆ ಮಾಡಿ ಇರುವಂಥ ದ್ರವ್ಯವು ನಿನಗೆ ಗೋಚರವಾಗುತ್ತಾಯಿದೆ ಆ ಸಂಸ್ಥಾನವನ್ನು ಜೀರ್ಣೋದ್ಧಾರ ಮಾಡಿಕೊಂಡು ಆ ದ್ವಾರಾಪುರಿಗೆ ನೀನು ಅಧಿಪತಿಯಾಗುಯೆಂದು ಆ ಮುನಿಯುಂ ಅಪ್ಪಣೆಯಂ ಕೊಡಲಾಗಿ ಆ ಅಪ್ಪಣೆ ಪ್ರಕಾರ ಈ ಹೊಯಿಸಳನು ಈ ದ್ವಾರಾಪುರಿಗೆ ಬಂದು ಪಟ್ಟಣವನ್ನು ಕಟ್ಟಿಸುತ್ತಯಿರಲಾಗಿ ಪೂರ್ವದಲ್ಲಿ ಸ್ಥಾಪನೆ ಮಾಡಿಯಿರುವಂಥ ದ್ರವ್ಯವು ಆ ಮುನಿಯ ಅನುಗ್ರಹದಿಂದ ಈತಗೆ ಗೋಚರವಾಯಿತು ಆ ಬಳಿಕ ಆ ದ್ರವ್ಯವನ್ನು ತೆಗೆದುಕೊಂಡು ಈ ಪಟ್ಣವನ್ನು ಕಟ್ಟಿಸಿ ಮಂದಿ ಮಾರ್ಬಲವನ್ನು ಕೂಡಿಸಿಕೊಂಡು ಅಮ್ಮನವರ ವರಪ್ರಸಾದದಿಂದ ದಿನೇ ದಿನೇ ಯಶಃ ಪ್ರಭಾವ ಉಂಟಾಗಿ ತನ್ನ ಭುಜಬಲ ಪರಾಕ್ರಮದಿಂದ ರಾಜ್ಯಕೋಶಂಗಳನ್ನು ಸಂಪಾದಿಸಿಕೊಂಡು ರಾಜ್ಯಭಾರಂಗೈಯುತ್ತಯಿದ್ದಲ್ಲಿ ಈತನಿಗೆ ವಿನಯಾದಿತ್ಯನೆಂಬ ಒಬ್ಬ ಕುಮಾರನಾದನು ಆತನು ಇದೇ ಪ್ರಕಾರ ಶಕವರುಷ ೧೦೧೦ಕ್ಕೆ ಸರಿಯಾದ ಪ್ರೆಂಗಳಸಂವತ್ಸರದ ಪರಿಯಂತ್ರಕ್ಕು ರಾಜ್ಯಭಾರಂಗೈಯುತ್ತ ಇರುವಾಗ ಆತಗೆ ಅಂಗನೃಪಾಲನೆಂಬ ಒಬ್ಬ ಶಕವರುಷ ೧೦೪೮ ಸರಿಯಾದ ಮನ್ಮಥನಾಮ ಸಂವತ್ಸರದಲ್ಲಿ ಒಬ್ಬ ಮಗನಾದನು ಆ ಅಂಗನೃಪಾಲರಾಯನಿಗೆ ಮೂವರು ಮಕ್ಕಳಾದರು ಅವರುಗಳ ಪೆಸರು ಬಲ್ಲಾಳನೆಂದು ವಿಷ್ಣುವರ್ಧನನೆಂದು ಆದಿತ್ಯನೆಂದು ಇಂತಿವರುಗಳು ಪುತ್ರರಾದರು ಇವರುಗಳೊಳು ಬಲ್ಲಾಳ ವಿಷ್ಣುವರ್ಧನ ಇವರಿಬ್ಬರೆ ಪ್ರಖ್ಯಾತಿಯಾಗಿ ರಾಜ್ಯಂಗೈಯುತ್ತಿರಲಾಗಿ ಈ ವಿಷ್ಣುದೇವನಿಗೆ ಒಬ್ಬಳು ಹೆಣ್ಣುಮಗುವಾದಳು ಆ ಹೆಣ್ಣುಮಗಳಿಗೆ ಬಾಲ್ಯದಿಂದಲೇ ಒಂದು ಸ್ತ್ರೀ ರಾಕ್ಷಸಗ್ರಹ ಸ್ಪರ್ಶವಾಗಿ ವಸ್ತ್ರಗ್ರಹಣ ಮಾಡದೆ ನಿರ್ವಾಣದಿಂದಲೆ ಸ್ವೇಚ್ಛಾವಿಲಾಸವಾಗಿಯಿರುತ್ತಾ

ಯಿದ್ದಲ್ಲಿ ತಂದೆಯಾದ ಬಿಟ್ಟಿದೇವನು ಬಹು ಪಶ್ಚಾತ್ತಾಪದಿಂದ ಯಂತ್ರ ಮಂತ್ರ ಮುಂತಾದ ನಾನಾ ಚಿಕಿತ್ಸೆಗಳಿಂದ ಬಹಳವಾಗಿ ಮಾಡಿಸಿದ್ದಾಗ್ಯು ಒಂದಕ್ಕೂ ಆ ರಾಕ್ಷಸಿಗ್ರಹವು ಉಚ್ಚಾಟನೆ ಆಗದೆಯಿದ್ದ ಕಾರಣ ಬಹು ಚಿಂತಾಕ್ರಾಂತನಾಗಿ ಇರುತ್ತಾ ಇದ್ದಲ್ಲಿ ಒಂದಾನೊಂದು ದಿವಸ ಈ ಪಟ್ಟಣಕ್ಕೆ ರಾಮಾನುಜಾಚಾರ್ಯರು ಬಂದ ಕಾರಣ ಬಹು ಚಿಂತಾಕ್ರಾಂತನಾಗಿ ಇರುತ್ತಯಿದ್ದ ವ್ಯಸನವನ್ನು ಅವರ ಸಮಿಾಪಕ್ಕೆ ಬಂದು ಸ್ವಾಮಿ ತನಗೆ ಒಬ್ಬ ಮಗಳುಂಟು ಆ ಮಗಳಿಗೆ ಬಾಲ್ಯದಿಂದ ಒಂದು ಸ್ತ್ರೀ ರಾಕ್ಷಸಿಗ್ರಹ ಸ್ಪರ್ಶವಾಗಿದೆ ಯಾದ ಕಾರಣ ವಸ್ತ್ರಗ್ರಹಣ ಮುಂತಾದ ಮಾಡದೆ ನಿರ್ವಾಣದಲ್ಲಿಯೆ ಸ್ವೇಚ್ಛಾವಿಲಾಸವಾಗಿದ್ದಾಳೆ ಈಕೆಗೆ ಆ ಗ್ರಹ ಉಚ್ಚಾಟನೆಯನ್ನು ಮಾಡಬೇಕು ಎಂಬದಾಗಿಯು ಹೇಳಿಕೊಂಡದ್ದರಿಂದ ಅಪ್ಪಣೆ ಕೊಟ್ಟಿದ್ದು ನಮ್ಮ ಮತಕ್ಕೆ ಸೇರಿ ನಮ್ಮ ಕೈಯಿಂದ ಚಕ್ರಾಂಕಿತ ಮಾಡಿಸಿಕೊಂಡು ನಮ್ಮ ಶಿಷ್ಯನಾದರೆ ಗ್ರಹ ಉಚ್ಚಾಟನೆಯು ಮಾಡಿಯೇವು ಎಂಬದಾಗಿ ಈ ರಾಮಾನುಜಾಚಾರ್ಯರು ಹೇಳಿದರಿಂದ ಈ ಬಿಟ್ಟಿದೇವನು ತನ್ನ ಜೈನಮತಸ್ತರ ಯಾವತ್ತನ್ನು ಕರಿಸಿ ನೀವು ನನ್ನ ಮಗಳ ಗ್ರಹ ಉಚ್ಚಾಟನೆಯು ಮಾಡುವದಕ್ಕೆ ನಿಮ್ಮ ಕೈಯಲ್ಲಿ ತೀರೀತೊ ಇಲ್ಲವೆ ರಾಮಾನುಜಾಚಾರ್ಯರ ಶಿಷ್ಯನಾಗಿ ಚಕ್ರಾಂಕಿತ ನಾಗಲೊ ಎಂಬದಾಗಿ ಮತಸ್ತರ ಕೇಳಲಾಗಿ ನಮ್ಮ ಕೈಲಿ ನಿರ್ವಾಹವಿಲ್ಲವೆಂದು ಹೇಳಿದ ಕಾರಣ ಈ ಬಿಟ್ಟಿದೇವನು ಈ ರಾಮಾನುಜಾಚಾರ್ಯರ ಸಮಿಾಪಕ್ಕೆ ಬಂದು ತನ್ನ ಮಗಳ ಗ್ರಹಣ ಉಚ್ಚಾಟಣೆ ಮಾಡಿದ್ದೇ ಉಂಟಾದರೆ ನಿಮ್ಮ ಶಿಷ್ಯನಾಗಿ ಚಕ್ರಾಂಕಿತನಾಗುತ್ತೇನೆ ಎಂಬದಾಗಿ ಈ ಬಿಟ್ಟಿದೇವ ಹೇಳಿಕೊಂಡ ಕಾರಣ ಈ ಆಚಾರ್ಯರು ಆ ಹೆಣ್ಣುಮಗಳ ಕರೆತರಿಸಿ ತೀರ್ಥಪ್ರಸಾದವನ್ನು ಕೊಡಲಾಗಿ ಆ ಹೆಣ್ಣುಮಗಳಿಗೆ ಗ್ರಹವು ಬಿಟ್ಟುಹೋಗಲಾಗಿ ಸ್ವಾಭಾವಿಕವಾಗಿ ವಸ್ತ್ರಪರಿಗ್ರಹಣ ಮಾಡಿಕೊಂಡು ಸುಖದಲ್ಲಿ ಇದ್ದಕಾರಣ ಈ ಬಿಟ್ಟಿದೇವನು ಆ ಆಚಾರ್ಯರ ಸಮಿಾಪಕ್ಕೆ ಬಂದಲ್ಲಿ ಚಕ್ರಾಂಕಿತವನ್ನು ಮಾಡಿ ನೀನು ಬಿಟ್ಟಿದೇವನಲ್ಲ ವಿಷ್ಣುವರ್ಧನ ರಾಯನೆಂದು ನಾಮಧೇಯವನ್ನು ರಾಮಾನುಜಾಚಾರ್ಯರು ಕೊಟ್ಟರು ಈ ವಿಷ್ಣು ವರ್ಧನರಾಯನ ವೃತ್ತಾಂತ ಯಾವತ್ತನ್ನು ವೇಲಾಪುರಿ ಕೇಶವ ಮಾಹಾತ್ಮ್ಯೆಯಲ್ಲಿ ಹೇಳಿಯಿದೆ

ಇತ್ತಲಾಗಿ ಈ ಬಲ್ಲಾಳರಾಯನ ವೃತ್ತಾಂತವೇನೆಂದರೆ ಈ ಉಭಯತ್ರರು ರಾಜ್ಯಂಗೈಯುತ್ತಿರಲಾಗಿ ಇವರಿಗೆ ಪೂರ್ವಫಲದಿಂದ ಸಿದ್ಧರಸ ಹೇಗೆ ಪ್ರಾಪ್ತಿ ಯಾಯ್ತೆಂದರೆ—ಇತ್ತಲಾಗಿ ಕೇರಳದೇಶದಲ್ಲಿ ಒಬ್ಬ ವಿಷ್ಣುಶರ್ಮನೆಂಬ ಬ್ರಾಹ್ಮಣನು ಬಹು ದರಿದ್ರನಾಗಿಯಿದ್ದು ಈ ದರಿದ್ರವನ್ನು ಅನುಭವಿಸಲಾರನೆಂದು [illegible] ಪರ್ವತಾಗ್ರದ ಮೇಲೆಹೋಗಿ ತಪಸ್ಸು ಮಾಡಿ ತನ್ನ ಇಷ್ಟಾರ್ಥ ವನ್ನು ಪಡಕೊಂಡು ಬರುತ್ತೇನೆಂದೆಂಬದಾಗಿ ತನ್ನೊಳು ತಾನೆ ಯೋಚಿಸಿಕೊಂಡು

ಆ ಬಳಿಕ ಈ ಚಂದ್ರದ್ರೋಣ ಪರ್ವತಕ್ಕೆ ಬಂದು ಈಶ್ವರನ ಕುರಿತು ಬಹುದಿನ ತಪಸ್ಸ ಮಾಡಲಾಗಿ ಈಶ್ವರನು ಮೆಚ್ಚಿ ಸಿದ್ಧರೂಪಿನಲ್ಲಿ ಬಂದು ಎಲೈ ಬ್ರಾಹ್ಮಣನೆ ನೀನು ಏನು ಕಾರಣ ತಪಸ್ಸು ಮಾಡುತ್ತ ಇದ್ದೀಯೆ ನಿನಗೆ ಏನು ಬೇಕು ಏನು ಕೇಳುತ್ತಾಯಿದ್ದೀಯೊ ಆ ಕೇಳಿದ ವರವನ್ನು ಕೊಡುತ್ತಾಯಿದ್ದೇನೆ ಎಂಬದಾಗಿ ಹೇಳಿದ್ದರಿಂದ ಆ ಬಳಿಕ ಈ ಬ್ರಾಹ್ಮಣನು ಎಲೈ ಸ್ವಾಮಿಯೆ ನಾನು ಇದು ಪರಿಯಂತ್ರ ಬಹು ದರಿದ್ರುವನ್ನು ಅನುಭವಿಸಿದೆನು ಇನ್ನು ಮೇಲೆ ಅನುಭವಿಸಲಾರದೆ ನಿನ್ನ ಕುರಿತು ತಪಸ್ಸು ಮಾಡಿದೆನು ಎಂಬದಾಗಿ ಹೇಳಿಕೊಂಡದ್ದರಿಂದ ಆಗ ಈ ಸಿದ್ಧರೂಪಿನ ಈಶ್ವರನು ಒಂದು ಗುಹೆಯ ಒಳಯಿಂಕೆ ಹೋಗಿ ಒಂದು ಪಾತ್ರೆಯಲ್ಲಿ ಸಿದ್ಧರಸವನ್ನು ತುಂಬಿ ತಂದು ಈ ಬ್ರಾಹ್ಮಣನಿಗೆ ಕೊಟ್ಟು ಎಲೈ ಬ್ರಾಹ್ಮಣೋತ್ತಮನೆ ಕೇಳೈ ನಿನ್ನ ದರಿದ್ರುವು ವಿಚ್ಛಿತಿಯಾಯ್ತು ಈ ಸಿದ್ಧರಸವನ್ನು ಇಟ್ಟುಕೊಂಡು ಲೋಹಕ್ಕೆ ಸ್ವಲ್ಪಮಾತ್ರ ರಸವ ಸೋಂಕಿಸಿದರೆ ಆ ಲೋಹವೆಲ್ಲ ಸುವರ್ಣವಾಗುತ್ತಯಿದೆ ಈ ಪ್ರಕಾರ ನೀನು ಸುವರ್ಣಗಳ ಮಾಡಿಕೊಂಡು ಸುಖದಿಂದಯಿರು ಎಂಬುದಾಗಿ ಅಪ್ಪಣೆ ಕೊಟ್ಟ ಕಾರಣ ಈ ಬ್ರಾಹ್ಮಣನು ಸಿದ್ಧರಸವನ್ನು ತೆಗೆದುಕೊಂಡು ಮಾರ್ಗಸ್ಥನಾಗಿ ಈ ದ್ವಾರಾಪುರಿಗೆ ಬಂದು ಒಬ್ಬ ಕಮ್ಮಾರನ ಮನಿಗೆ ಬಂದು ಇಳಿದುಕೊಂಡು ತಾನು ತಂದುಯಿರುವಂಥ ಸಿದ್ಧರಸವನ್ನು ಭೂಮಿಯಲ್ಲಿ ಇರಿಸದೆ ಅಂತರದಲ್ಲಿ ತಗಲುಹಾಕಿ ಊರ ಹೊರಯಿಂಕೆ ಸ್ವಯಂಪಾಕಕ್ಕೆ ಹೋಗಿ ನದಿಯ ತೀರದಲ್ಲಿ ಸ್ವಯಂಪಾಕವನ್ನು ಮಾಡಿಕೊಂಡು ಹೊರಟುಬರುವಂಥ ವ್ಯಾಳಕ್ಕೆ ಇತ್ತಲೀ ಕಮ್ಮಾರನು ತನ್ನ ಮನೆಯಲ್ಲಿ ತನ್ನ ಕುಲ ಉದ್ಯೋಗವ ಮಾಡುತ್ತ ಇರಲಾಗಿ ಮನೆಯಲ್ಲಿ ಹೂಡಿಯಿರುವಂಥ ಈ ಕಮ್ಮಾರನ ಕುಲುಮೆಯ ಶಕೆಗೆ ಅಂತರದಲ್ಲಿ ತಗಲುಹಾಕಿರುವಂಥ ಸಿದ್ಧರಸದ ಪಾತ್ರೆಯು ದ್ರವಿಸಿ ಆ ದ್ರವಿಸಿದ ಸಿದ್ಧರಸದ ಬಿಂದು ಕೆಳಗೆ ಇಟ್ಟುಯಿರುವಂಥ ಲೋಹಗಳ ಮೇಲೆ ಬೀಳಲು ಯಾವತ್ತು ಸುವರ್ಣವಾಗಿರಲು ಈ ಕಮ್ಮಾರನು ಕುಲುಮೆಯಿಂದ ಒಳಯಿಂಕೆ ಬಂದು ನೋಡಲು ಈ ಲೋಹಗಳು ಯಾವತ್ತು ಸುವರ್ಣವಾಗಿ ಇದ್ದದನ್ನು ಕಂಡು ಇದು ಏನು ನಿಮಿತ್ಯ ಸುವರ್ಣವಾಯ್ತು ಎಂದು ಯೋಚಿಸಿ ನೋಡಿ ಈಗ ನಮ್ಮ ಮನಿಗೆ ಒಬ್ಬ ಬ್ರಾಹ್ಮಣನು ಬಂದು ಇದ್ದಾನೆ ಆತನ ಸಮೀಪದಲ್ಲಿ ಏನೋ ಕ್ರೀಯ ಇದ್ದೀತು ಈತ ಏನೇನೊ ತಂದುಯಿದ್ದಾನೆ ಎಂಬದಾಗಿ ಈತ ಇಟ್ಟು ಇರುವ ಸಾಮಾನಿನ ಎಡಬಲ ಮುಂತಾಗಿ ನೋಡಿದಲ್ಲಿ ಅಂತರದಲ್ಲಿ ಕಟ್ಟಿರುವ ಪಾತ್ರೆಯಂ ಕಂಡು ಆ ಪಾತ್ರೆಯ ಕೆಳಗೆ ಇಟ್ಟುಯಿರುವಂಥ ಈ ಲೋಹಗಳು ಯಾವತ್ತು ಸುವರ್ಣವಾಗಿ ಇದ್ದದಂ ತಿಳಿದು ಈ ಪಾತ್ರೆಯಲ್ಲಿಯೆ ಕ್ರೀಯೆ ಇದೆ ಇದಂ ಪರೀಕ್ಷಿಸಬೇಕುಂತ ಆ ಬ್ರಾಹ್ಮಣ ತಂದು ಕಟ್ಟಿ ತೂಗ್ಹಾಕಿದ್ದ ಪಾತ್ರೆಯಂ ಬಿಚ್ಚಿ ಒಂದು ಕಡ್ಡಿಯಲ್ಲಿ ರಸವಂ ಅದ್ದಿ ಒಂದು ಲೋಹಕ್ಕೆ ಮುಟ್ಟಿಸಲಾಗಿ ಆ ಲೋಹವು ಸುವರ್ಣವಾಗಲು ಈ ರಸವೇ ಸಿದ್ಧರಸವೆಂದು ನಿಶ್ಚಯ ಮಾಡಿಕೊಂಡು ಈ ರಸ

ಯಾವತ್ತನ್ನು ತಾನು ಅಪಹರಿಸುವಂಥ ಯತ್ನವ ಯಾವ ಪ್ರಕಾರ ಮಾಡಬೇಕೆಂದು ಯೋಚಿಸಿ ತನ್ನ ಮನೆಯಲ್ಲಿ ಇರುವಂಥ ಬದುಕು ಬಾಳು ಒಡವೆ ವಸ್ತು ಮುಂತಾದ ಪದಾರ್ಥ ಯಾವತ್ತನ್ನು ಜಾಗ್ರತೆಯಿಂದ ನೆರಮನೆಗೆ ಸಾಗಿಸಿಬಿಟ್ಟು ತನ್ನ ಮನೆಗೆ ಅಗ್ನಿಪ್ರವೇಶವಂ ಮಾಡಿಕೊಂಡು ವದನತಾಡನವಂ ಮಾಡಿಕೊಳುತ್ತ ಇರುವಂಥ ಸಮಯಕ್ಕೆ ಈ ಬ್ರಾಹ್ಮಣನು ತನ್ನ ಸ್ನಾನ ಜಪ ಮುಂತಾಗಿಯು ಭೋಜನವನ್ನು ಮಾಡಿಕೊಂಡು ತಾನು ಇಟ್ಟುಯಿರುವ ಸಾಮಾನು ಯಾವತ್ತನ್ನು ತೆಗೆದು ಮುಂದೆ ಪ್ರಯಾಣವಾಗಿ ಹೋಗುವ ನಿಮಿತ್ಯವಾಗಿ ಈ ಮನೆಗೆ ಬಂದು ನೋಡಲು ಈ ಮನೆಯು ಅಗ್ನಿಯಿಂದ ದಹಿಸುತ್ತಯಿರುವದ ಕಂಡು ಈತನು ರೋದನ ವದನ ತಾಡನ ಮುಂತಾದ ಮಾಡಿಕೊಂಡು ಬಹುದುಃಖಪಡುತ್ತ ಈ ದ್ವಾರಾಪುರಿಗೆ ಅಧಿಪತಿಯಾದಂಥ ಬಲ್ಲಾಳರಾಯನ ಬಳಿಗೆ ಬಂದು ಎಲೈ ದೊರೆಯೆ ನಿನ್ನ ಪಟ್ಟಣಕ್ಕೆ ಬಂದು ಬಹುದಿನ ತಪಸ್ಸು ಮಾಡಿ ಈಶ್ವರನಿಂದ ಪಡಕೊಂಡು ಬಂದಿದ್ದಂಥ ಸಿದ್ಧರಸವನ್ನು ಕಳಕೊಳ್ಳುವದಕ್ಕೆ ಯೋಗ ನನಗಾಯ್ತುಯೆಂದು ಮೊರೆಯಿಡಲಾಗಿ ಆ ದೊರೆಯು ಇದೇನು ನಿಮಿತ್ಯವೆಂಬದಾಗಿ ಪೂರ್ವಾಪರ ವೃತ್ತಾಂತ ಯಾವತ್ತನ್ನು ವಿಚಾರಿಸಿ ಈ ಕಮ್ಮಾರನು ಈತನ ಸಿದ್ಧರಸವನ್ನು ಅಪಹರಿಸಿದ್ದಾನೆ ಇದಕ್ಕೆ ಮೋಸವಿಲ್ಲ ಈ ಪಾಂಚಾಳರು ಬಹುಘಾತಕರು ಎಂದು ತಿಳಿದು ಆ ಕಮ್ಮಾರನ ಹಿಡಿತರಿಸಿ ನಾನಾಬಗೆ ಶಿಕ್ಷೆಯಿಂದ ಉಪದ್ರವ ಮಾಡಲು ನೆರಮನೆಯಲ್ಲಿ ಇಟ್ಟಿರುವಂಥ ಸಿದ್ಧರಸದ ಪಾತ್ರೆಯನ್ನು ಈ ಬ್ರಾಹ್ಮಣನ ವಶಕ್ಕೆ ತಂದುಕೊಡಲು ಆಗ ಈ ಬ್ರಾಹ್ಮಣನು ಬಹುಸಂತೋಷಬಟ್ಟು ಈ ಸಿದ್ಧರಸವು ನನಿಗೆ ದಕ್ಕುವದಿಲ್ಲ ದೊರೆಗಳಿಗೆ ಸರಿ ಅವರಿಂದ ಸ್ವಾಸ್ತಿ ವೃತ್ತಿಗಳ ಸಂಪಾದಿಸಿಕೊಂಡು ಸುಖದಿಂದ ಇರುವ ಎಂಬದಾಗಿ ಯೋಚಿಸಿಕೊಂಡು ಈ ಸಿದ್ಧರಸವನ್ನು ತೆಗೆದುಕೊಂಡು ಹೋಗಿ ದೊರೆಯ ಸಮೀಪದಲ್ಲಿಯಿಟ್ಟು ದೊರೆಯೇ ಈ ಸಿದ್ಧರಸವನ್ನು ಬಹು ಕಷ್ಟಬಟ್ಟು ಸಂಪಾದಿಸಿದೆನು ನನ್ನಲ್ಲಿ ಇರುವಂಥಾದು ಅಲ್ಲ ನೀವು ದೊರೆಗಳು ನಿಮ್ಮಲ್ಲಿ ಇದ್ದರೆ ಅನೇಕ ಜನರನ್ನು ಸಂರಕ್ಷಣೆ ಮಾಡೀರಿ ಆದ್ದರಿಂದ ಈ ಸಿದ್ಧರಸವನ್ನು ನೀವು ತೆಗೆದುಕೊಂಡು ನನಗೆ ಸ್ವಾಸ್ತಿ ವೃತ್ತಿಗಳ ಕೊಡಿಸಿದರೆ ಸ್ವಸ್ತದಲ್ಲಿ ಸ್ನಾನ ಜಪವನ್ನು ಮಾಡಿಕೊಂಡು ಇದ್ದೇನು ಎಂಬದಾಗಿ ಈ ಬ್ರಾಹ್ಮಣನು ಕೇಳಿಕೊಂಡ ಕಾರಣ ಈ ದೊರೆಯಾದ ಬಲ್ಲಾಳರಾಯನು ಈ ಸಿದ್ಧರಸವನ್ನು ತೆಗೆದುಕೊಂಡು ತನ್ನ ಬೊಕ್ಕಸದಲ್ಲಿ ಇಡಿಸಿಬಿಟ್ಟು ಈ ಬ್ರಾಹ್ಮಣನಿಗೆ ಅನೇಕ ಸ್ವಾಸ್ತಿ ವೃತ್ತಿಗಳ ಕೊಡಿಸಿಕೊಟ್ಟು ಎಲೈ ಬ್ರಾಹ್ಮಣೋತ್ತಮನೆ ನೀನು ನಮ್ಮ ಪಟ್ಟಣದಲ್ಲಿ ಸ್ನಾನ ಜಪವನ್ನು ಮಾಡಿಕೊಂಡು ಸುಖದಿಂದಯಿರು ಎಂಬದಾಗಿ ಅಪ್ಪಣೆ ಕೊಟ್ಟ ಕಾರಣ ಈ ಬ್ರಾಹ್ಮಣನು ತನ್ನ ಕುಟುಂಬ ಮುಂತಾಗಿ ಸೌಖ್ಯದಿಂದ ಇರುತ್ತ ಯಿದ್ದನು ಇತ್ತಲಾಗಿ ಈ ದೊರೆಯು ಈ ಸಿದ್ಧರಸವು ನಮ್ಮಲ್ಲಿ ಇದ್ದ ಬಳಿಕ ನಮ್ಮ ರಾಜ್ಯದ ಪ್ರಜೆಗಳನ್ನು ಸುಖದಿಂದ ಇಟ್ಟುಕೊಂಡುಯಿರುವಾ ಎಂಬದಾಗಿ ಯೋಚಿಸಿಕೊಂಡು

ಪ್ರಜೆಗಳು ಯಾವತ್ತನ್ನು ಕರೆಸಿಕೊಂಡು ಎಲೈ ಪ್ರಜೆಗಳಿರಾ ಇದು ಪರಿಯಂತ್ರವೂ ನಮಗೆ ಸಿದ್ಧಾಯವನ್ನು ಕೊಡುತ್ತಾಯಿದ್ದಿರಿ ಇನ್ನುಮೇಲೆ ನಮಗೆ ಸಿದ್ಧಾಯವ ಕೊಡಕೆಲಸವಿಲ್ಲ ನಿಮ್ಮ ಕೈಲಾಪಪ್ಪು ಭೂಮಿಯನ್ನು ಉತ್ತುಕೊಂಡು ಅದರ ಫಲ ಯಾವತ್ತನ್ನು ನೀವೆ ತೆಗೆದುಕೊಂಡು ನಮ್ಮ ಸಿದ್ಧಾಯದ ಬಗ್ಗೆ ನೀವು ಭೂಮಿಯನ್ನು ಉತ್ತು ಸವೆದು ಇರುವ ಮೋಟು ಕುಳುಗಳನ್ನು ನಮಗೆ ತಂದುಕೊಡಿ ಎಂಬದಾಗಿ ಸಕಲ ಪ್ರಜೆಗಳಿಗೂ ಕಟ್ಟುಮಾಡಿಸಿದನು ಆ ಪ್ರಜೆಗಳು ಯಾವತ್ತು ಜನರು ಬಹುಸಂತೋಷಬಟ್ಟು ಇಂಥ ದೊರೆಯುಂಟೆ ಈ ಮೋಟುಕುಳುಗಳಿಂದ ನಮಗೆ ಆಗತಕ್ಕದ್ದು ಏನು ಎಂಬದಾಗಿ ಸಮಸ್ತ ಪ್ರಜೆಗಳು ವರುಷಂಪ್ರತಿಯಲ್ಲು ತಾವು ಉತ್ತು ಸವದಂಥ ಮೋಟು ಕುಳುಗಳನ್ನು ತಂದು ಕೊಡುವರು ಈ ಕುಳುಗಳು ಯಾವತ್ತಕ್ಕು ಸಿದ್ಧರಸ ಸ್ಪರುಷವನ್ನೇ ಮಾಡಿಕೊಂಡು ಹೀಗೆ ಅನೇಕ ದ್ರವ್ಯವನ್ನು ಸಂಪಾದಿಸಿದಲ್ಲಿ ಈ ದ್ರವ್ಯದ ಬಲುಮೆಯಿಂದ ಈ ಬಲ್ಲಾಳ ವಿಷ್ಣುವರ್ಧನ ರಾಯ ಸಹ ಬೇಲೂರು ಪಟ್ಣವನ್ನು ಕಟ್ಟಿಕೊಂಡು ಈ ದ್ವಾರಾಪುರಿಯಲ್ಲಿ ಕೂಡ ಇರುತ್ತ ರಾಜ್ಯಪರಿಪಾಲನೆಯನ್ನು ಮಾಡಿಕೊಂಡು ಇರುತ್ತಿರುವಂಥ ಸಮಯದಲ್ಲಿ ದಕ್ಷಿಣದೇಶದಿಂದ ಜಕಣಾಚಾರಿ ಎಂಬ ಒಬ್ಬ ಶಿಲ್ಪಿಯು ಹನ್ನೆರಡು ಸಾವಿರ ಬಂಡಿ ಸಮೇತವಾಗಿ ಈ ದ್ವಾರಾಪುರಿಗೆ ಬಂದನು ಇವನು ಪೂರ್ವಜನ್ಮದಲ್ಲಿ ವಿಶ್ವಕರ್ಮನು ಅವನಿಗೆ ಶಾಪದ ನಿಮಿತ್ಯದಿಂದ ಭೂಲೋಕದಲ್ಲಿ ಜನಿಸಿ ಶಿಲ್ಪಿಯಾಗಿ ಚೋಳದೇಶದಿಂದ ಇಲ್ಲಿಗೆ ಬರುವಾಗ್ಯೆ ಅಲ್ಲಿ ಅನೇಕವಾದ ದೇವಾಲಯಗಳ ಕಟ್ಟಿ ಇಲ್ಲಿಗೆ ಬಂದು ಈ ಬಲ್ಲಾಳರಾಯನ ಕಂಡು ಚೋಳದೇಶದ ದೊರೆಯು ನನ್ನ ಕೈಯಿಂದ ಅನೇಕವಾದ ದೇವಾಲಯಗಳನ್ನು ಕಟ್ಟಿಸಿದನು ಇಲ್ಲಿಗೆ ನಿಮ್ಮ ಮಹಿಮೆಯ ಕೇಳಿ ಬಂದೆನು ಅಪ್ಪಣೆ ಕೊಟ್ಟರೆ ಇಲ್ಲಿಯೂ ದೇವಾಲಯಗಳ ಕಟ್ಟೇನೂ ಎಂಬದಾಗಿ ಕೇಳಿಕೊಂಡ ಕಾರಣ ಈ ಬಲ್ಲಾಳರಾಯನು ಒಪ್ಪಿಕೊಂಡುಯಿರುತ್ತಾಯಿದ್ದಲ್ಲಿ ಈ ಬಲ್ಲಾಳರಾಯಗೆ ಕುಷ್ಠವ್ಯಾಧಿಯಾಗಿಯಿತ್ತು

ಈ ಬಲ್ಲಾಳರಾಯನು ಒಂದಾನೊಂದು ದಿವಸ ಬೇಂಟೆಯಾಡುವ ನಿಮಿತ್ಯವಾಗಿ ಚತುರಂಗ ಮಾರ್ಬಲವನ್ನು ಕಟ್ಟಿಕೊಂಡು ಬೇಂಟೆಯನಾಡುತ್ತಾಯಿರಲಾಗಿ ಆ ಅರಣ್ಯದಲ್ಲಿ ಒಂದು ಪರ್ವತದಲ್ಲಿ ಋಷ್ಯಶೃಂಗನೆಂಬ ಋಷಿಯು ತಪಸ್ಸು ಮಾಡಿಕೊಂಡು ಇರುತ್ತಾಯಿದ್ದನು ಈ ದೊರೆಯು ಆ ಋಷಿಯ ದರುಶನ ನಿಮಿತ್ಯವಾಗಿ ಋಷಿಯ ಸಮೀಪಕ್ಕೆ ಬಂದು ವಂದನಾದಿಗಳ ಮಾಡಿ ಸ್ವಾಮಿ ಋಷಿಗಳಿರಾ ನಿಮ್ಮ ದರುಶನದಿಂದ ನಾನು ಕೃತಾರ್ಥನಾದೆನು ನನಗೆ ಕುಷ್ಠವ್ಯಾಧಿಯಿಂದ ಬಹುಸಂಕಟಪಡುತ್ತಾಯಿದ್ದೇನೆ ಇದಕ್ಕೆ ಪರಿಹಾರವೇನು ಎಂದು ಕೇಳಿಕೊಂಡದ್ದರಿಂದ ಆಗ ಆ ಋಷೀಶ್ವರರು ಎಲೈ ರಾಯನೆ ನೀನು ಶಿವಾಲಯಗಳನ್ನು ಕಟ್ಟಿಸಿ ಶಿವಪ್ರತಿಷ್ಠೆಯನ್ನು ಮಾಡಿಸಿದರೆ ಈ ಕುಷ್ಠವ್ಯಾಧಿಯು ನಿನಗೆ ಹೋಗಿ ಆ ಬಳಿಕ ಅನೇಕ ಸಂಪದ

ಉಂಟಾಗುವದು ಎಂಬದಾಗಿ ಅಪ್ಪಣೆ ಕೊಡಲಾಗಿ ಆಗ ಈ ರಾಯನು ಒಳ್ಳೆ ಕೆಲಸ ವಾಗುತ್ತಯಿದೆ ಶಿವಪ್ರತಿಷ್ಠೆಗಳನ್ನು ಮಾಡಿದರೆ ಇಹಲೋಕದಲ್ಲಿ ಸಂಪದವೂ ಪರಲೋಕದಲ್ಲಿ ಅನೇಕ ಪುಣ್ಯವೂ ಉಂಟಾಗುತ್ತೆ ಎಂಬದಾಗಿ ಯೋಜನೆ ಮಾಡುತ್ತ ಯಿದ್ದಂಥ ವ್ಯಾಳ್ಯಕ್ಕೆ ಈ ಜಕಣಾಚಾರಿ ಎಂಬಂಥ ಶಿಲ್ಪಿಯು ಬಂದು ಕೇಳಿದರಿಂದ ಹಾಗೇ ಆಗಲಿ ಅನೇಕ ಶಿವಾಲಯಗಳ ನಿರ್ಮಾಣ ಮಾಡು ನಿನಗೆ ಅನೇಕ ದ್ರವ್ಯ ವನ್ನು ಕೊಡುತ್ತಯಿದ್ದೇನೆ ಎಂಬದಾಗಿ ಹೇಳಿದಲ್ಲಿ ಆ ಶಿಲ್ಪಿಯು ನನಗೆ ಕ್ಲುಪ್ತ ಉಂಟು ನಾನು ನಿಲ್ಲಿಸಿದ ಪ್ರತಿಮೆಗಳಲ್ಲಿ ಉದುರುವಂಥ ಸಣ್ಣಕಲ್ಲಪುಡಿ ಎಷ್ಟು ಉಂಟೊ ಆ ತೂಕದ ದ್ರವ್ಯವನ್ನು ಕೊಟ್ಟರೆ ನಾನು ನಿರ್ಮಾಣ ಮಾಡೇನು ಎಂಬ ದಾಗಿ ಕೇಳಿಕೊಂಡ ಕಾರಣ ಅದೇ ಪ್ರಕಾರಕ್ಕೆ ದೇವಾಲಯಗಳ ಕಟ್ಟಿಸಿದನು ಈ ದೊರೆತನವನ್ನು ಪಡೆದಂಥ ತನ್ನ ಪ್ರಪಿತಾಮಹನಾದಂಥ ಹೊಯ್ಸಳನೆಂಬ ನಾಮ ಧೇಯವನ್ನೆ ಈ ಈಶ್ವರಗೆ ನಾಮವನ್ನು ಮಾಡಿ ಹೊಯ್ಸಳೇಶ್ವರನೆಂಬದಾಗಿ ಈಶ್ವರಪ್ರತಿಷ್ಠೆಯನ್ನು ಮಾಡಿ ಈ ಈಶ್ವರನ ಪರಿವಾರ ದೇವತೆಗಳು ಈ ಈಶ್ವರನ ಅರಾಧನೆ ಬಗ್ಗೆ ಅನೇಕ ಗ್ರಾಮಭೂಮಿಗಳನ್ನು ಬಿಟ್ಟು ಅನೇಕ ಸೇವಾರ್ಥಗಳನ್ನು ಮಾಡಿಸುತ್ತಯಿದ್ದನು ಈ ಹೊಯ್ಸಳೇಶ್ವರನ ದೇವಸ್ಥಾನಕ್ಕೆ ವಿಮಾನವನ್ನು ಯಾಕೆ ಕಟ್ಟಲಿಲ್ಲಯೆಂದರೆ ಕೈಲಾಸಪರ್ವತದಿಂದ ಈಶ್ವರನು ಜಂಗಮರೂಪಿನಿಂದ ಈ ಭೂಲೋಕಕ್ಕೆ ಬಂದು ಈ ದೇವಸ್ಥಾನವನ್ನು ನೋಡಿ ಅತಿಸಂಭ್ರಮಬಟ್ಟು ಈ ದೇವಸ್ಥಾನವನ್ನು ತನ್ನ ಕೈಲಾಸಪರ್ವತಕ್ಕೆ ತೆಗೆದುಕೊಂಡು ಹೋಗಬೇಕಂಥ ಮನಸ್ಸಿನಲ್ಲಿ ಯೋಚಿಸಿ ಈ ಜಕಣಾಚಾರ್ಯರ ಸ್ವಪ್ನದಲ್ಲಿ ಈಶ್ವರನು ಬಂದು ಎಲೈ ಶಿಲ್ಪಿಯೇ ಈ ದೇವಸ್ಥಾನವನ್ನು ನಾನು ಕೈಲಾಸಪರ್ವತಕ್ಕೆ ತೆಗೆದುಕೊಂಡು ಹೋಗುವ ನಿಮಿತ್ಯ ಪುಷ್ಪಗಿರಿ ಎಂಬ ಪರ್ವತದಲ್ಲಿ ವಾಸಮಾಡಿಕೊಂಡುಯಿದ್ದೇನೆ ಶೀಘ್ರವಾಗಿ ವಿಮಾನವನ್ನು ನಿರ್ಮಾಣಮಾಡು ನಾನು ತೆಗೆದುಕೊಂಡು ಹೋಗು ತ್ತೇನೆ ಎಂಬದಾಗಿ ಅಪ್ಪಣೆ ಕೊಟ್ಟದ್ದರಿಂದ ಆ ಜಕಣಾಚಾರಿಯು ಈ ಬಲ್ಲಾಳನೆಂಬ ದೊರೆಗೆ ತನಗೆ ಕಂಡ ಸ್ವಪ್ನದ ವೃತ್ತಾಂತವನ್ನು ಹೇಳಲಾಗಿ ಆ ದೊರೆಯು ಮನಸ್ಸಿ ನಲ್ಲಿ ಯೋಚಿಸಿ ಈ ವಿಮಾನವ ಕಟ್ಟಿದರಷ್ಟೆ ತೆಗೆದುಕೊಂಡು ಹೋಗುವದು ಆದ್ದರಿಂದ ವಿಮಾನವನ್ನೇ ಕಟ್ಟಬ್ಯಾಡ ಎಂಬದಾಗಿ ಈ ಶಿಲ್ಪಿಯಾದ ಜಕಣಾಚಾರಿಗೆ ಹೇಳಿ ನಿಲ್ಲಿಸಿದರಿಂದ ಆ ಬಳಿಕ ಆ ದೊರೆಯು ಅತಿವಿಸ್ಮಿತನಾಗಿ ಸಂತೋಷದಿಂದ ಈ ದೇವಸ್ಥಾನದ ಪ್ರತಿಮೆಗಳ್ಯಾವತ್ತಕ್ಕು ಇಂಗಲೀಕದ ಬಣ್ಣವನ್ನು ಹಾಕಿಸಿ ಆ ಬಣ್ಣ ಮಾಸೀತು ಎಂಬದಾಗಿ ಸುರೆಪಟ್ಟುದ ಗವಸಣಿಗೆ ಹಾಕಿಸಿ ಅತಿಸಂಭ್ರಮ ದಿಂದ ಈ ಹೊಯ್ಸಳೇಶ್ವರದೇವರಿಗೆ ಅನೇಕ ಉತ್ಸವ ಆರಾಧನೆಗಳನ್ನು ಮಾಡಿಸಿ ಕೊಂಡು ಈ ದ್ವಾರಾಪುರಿ ಸಂಸ್ಥಾನವನ್ನು ತನ್ನ ಕ್ಷಾತ್ರದಿಂದ ರಾಜ್ಯಭಾರವನ್ನೆ ಮಾಡಿಕೊಂಡು ಬಹುದಿವಸ ಇರುತ್ತಯಿದ್ದನು ಅನಂತರದಲ್ಲಿ ಈ ವಿಷ್ಣುವರ್ಧನ ರಾಯನೆಂಬ ದೊರೆಗೆ ನರಸಿಂಹರಾಯನೆಂಬ ಮಗ ಹುಟ್ಟಿದನು ಆತನು ಇದೇ

ಪ್ರಕಾರ ರಾಜ್ಯಭಾರಂಗೈಯುತ್ತ ಇದ್ದನು ಆತಗೆ ವೀರಬಲ್ಲಾಳರಾಯನೆಂಬ ಒಬ್ಬ ಮಗ ಹುಟ್ಟಿದನು ಆತನು ಬಹುಪರಾಕ್ರಮಿಯಾಗಿ ಅನೇಕ ದೇಶಕೋಶಗಳ ಕಟ್ಟಿಕೊಂಡು ಈ ದ್ವಾರಾಪುರಿಯೆಂಬ ಪಟ್ಟಣದಲ್ಲಿ ಇದ್ದುಕೊಂಡು ರಾಜ್ಯಭಾರಂಗೈಯುತ್ತ ಇದ್ದನು ಈತನ ಪರಾಕ್ರಮವು ದಶದಿಕ್ಕಿನಲ್ಲಿ ಪ್ರಖ್ಯಾತಿಯಾಗಿಯಿದ್ದ ಕಾರಣ ಈ ಬಲ್ಲಾಳನ ಪರಾಕ್ರಮವನ್ನು ಈತನ ರೂಪು ಲಾವಣ್ಯ ಮುಂತಾದನ್ನು ಡಿಳ್ಳಿ ಪಾಚ್ಛಾಯಿಯ ಮಗಳು ಕೇಳಿದ್ದರಿಂದ ಆಕೆಯು ಇಂಥ ಪರಾಕ್ರಮಿಯಾದಂಥ ಪುರುಷ ವೀರಬಲ್ಲಾಳರಾಯನನ್ನೆ ನಾನು ಮದುವೆ ಆಗುವದೇ ಹೊರತಾಗಿ ಇನ್ನೊಬ್ಬರನ್ನು ನಾನು ವರಿಸುವದಿಲ್ಲ ಎಂದು ಮನಸ್ಸಿನಲ್ಲಿ ನಿಶ್ಚೈಸಿ ತನ್ನ ತಂದೆಯಾದ ಪಾಚ್ಛಾಯಿನ ಸಂಗಡ ಹೇಳಿಕೊಂಡದ್ದೇನೆಂದರೆ ತನ್ನನ್ನು ವೀರಬಲ್ಲಾಳಗೆ ಕೊಟ್ಟು ಮದುವೆಯ ಮಾಡು ಇನ್ನೊಬ್ಬ ಪುರುಷನ ನಾನು ಮದುವೆಯಾಗುವುದುಯಿಲ್ಲ ಎಂಬದಾಗಿ ಹೇಳಿದ ಕಾರಣ ಅಸ್ತುಪಟ್ಟು ತನ್ನ ಬಗೆ ಬುದ್ಧಿಮನುಷ್ಯರನ ಕೂಡಲಿಟ್ಟು ತನ್ನ ನಿರೂಪನ್ನು ಬರಸಿ ಕಳುಹ್ಸಿದಲ್ಲಿ ಈ ಬಲ್ಲಾಳರಾಯನು ತಾನು ಹೋಗದೆ ತಾನು ಹಿಡಿದಿರುವಂಥ ಆಯುಧವನ್ನು ತನ್ನ ಬಗೆ ಮಂತ್ರಿ ಪ್ರಧಾನಿಗಳು ಕೂಡಲಿಟ್ಟು ಬಹುಮಂದಿ ಮಾರ್ಬಲ ಸಮೇತವಾಗಿ ಡಿಳ್ಳಿಗೆ ಕಳುಹ್ಸಿಕೊಟ್ಟಲ್ಲಿ ಆ ಪಾಚ್ಛಾಯಿ ಒಪ್ಪಿಕೊಂಡು ಆ ಆಯುಧಕ್ಕೆ ತನ್ನ ಕುಮಾರಿತಿಯ ಧಾರಯನೆರದು ಕೊಟ್ಟು ತನ್ನ ಚತುರಂಗ ಮಾರ್ಬಲ ಸಮೇತವಾಗಿ ಕೂಡಲಿಟ್ಟು ತನ್ನ ಮಗಳನ್ನು ಆಯುಧದ ಸಂಗಡ್ಲೆ ಈ ಬಲ್ಲಾಳರಾಯನ ಬಳಿಗೆ ಕಳುಹಿಸಿಕೊಟ್ಟಲ್ಲಿ ಆ ವೀರಬಲ್ಲಾಳರಾಯನು ಅತಿಸಂಭ್ರಮಬಟ್ಟು ತನ್ನ ರಾಣಿವಾಸದಲ್ಲಿ ತಾಸಿಟ್ಟುಬಿಟ್ಟನು ಕೆಲವು ದಿವಸದ ಮೇಲೆ ಯೋಚಿಸಿಕೊಂಡು ತಾನು ಕ್ಷತ್ರಿಯನು ತನಗೆ ಮ್ಲೇಚ್ಛಜಾತಿಯಲ್ಲಿ ಸಂಗವಾಗುವಂತಾದ್ದು ಯುಕ್ತವಲ್ಲ ಎಂಬದಾಗಿ ಆ ಪಾಚ್ಛಾಯ ಮಗಳ ಸಂಗಡ ಅಂಗಸಂಗವನು ಮಾಡದೆ ಬಿಟ್ಟನು ಈ ವೃತ್ತಾಂತ ಯಾವತ್ತನ್ನು ಸವಿಸ್ತಾರವಾಗಿ ಬರೆಸಿ ತಮ್ಮ ತಂದೆಯಾದ ಪಾಚ್ಛಾಯ ಬಳಿಗೆ ಆತನ ಮಗಳು ತನಗೆ ಆಪ್ತರಾದಂಥವರನ ಕೂಡಲಿಟ್ಟು ಗೋಪ್ಯವಾಗಿ ಕಳುಹ್ಸಿಕೊಟ್ಟಳು ಈಕೆ ಕಡೆಯಿಂದ ಬಂದಂಥ ಅವರುಗಳು ಪಾಚ್ಛಾಯ ಭೇಟಿಮಾಡಿಕೊಂಡು ಇವಳು ಬರದುಕೊಟ್ಟಂಥ ಲೇಖನವನ್ನು ಕೊಟ್ಟಲ್ಲಿ ಆ ಪಾಚ್ಛಾಯಿಯು ನೋಡಿಕೊಂಡು ಬಹಳ ಕೋಪಾಟೋಪದಿಂದ ಬಣ್ಣಕ್ಕೆ ಲಕ್ಷಕುದುರೆಯನ್ನು ತೆಗೆದುಕೊಂಡು ಚತುರಂಗಬಲ ಸಮೇತನಾಗಿ ತಾನೇ ಹೊರಟುಬಂದು ಈ ದ್ವಾರಾಪುರಿಯೆಂಬ ಪಟ್ಣಕ್ಕೆ ಮುತ್ತಿಗೆ ಹಾಕಲಾಗಿ ಈ ವಿವರವನ್ನು ಬಲ್ಲಾಳರಾಯ ತಿಳಿದು ತನ್ನ ಭುಜಬಲ ಪರಾಕ್ರಮದಿಂದ ಚತುರಂಗ ಬಲಸಮೇತನಾಗಿ ಹೊರಹೊರಟು ಈ ಪಾಚ್ಛಾಯಿ ಸಂಗಡ ಯುದ್ಧವಂ ಮಾಡಲಾಗಿ ಬಂದಂಥ ಪಾಚ್ಛಾಯಿಯು ವೀರಬಲ್ಲಾಳನ ಸಂಗಡ ಯುದ್ಧವನ್ನು ಮಾಡಲಾರದೆ ನಾಲ್ಕುಯೋಜನದ ಆಚೆಗೆ ಹಿಂದಕ್ಕೆ ಹೋಗಿ ತನ್ನ ಮಂದಿ ಕುದುರೆ ಮುಂತಾದ ಚತುರಂಗ ಮಾರ್ಬಲವನೂ ಸಹವಾಗಿ ದಂಡನ್ನು ಬಿಟ್ಟುಕೊಂಡನು

ಇತ್ತಲಾಗಿ ಈ ವೀರಬಲ್ಲಾಳರಾಯನ ಅಕ್ಕನು ದಕ್ಷಿಣದೇಶದಲ್ಲಿ ಚಂದಿ ಚಂದಾವರ ಎಂಬುವಂಥ ಪಟ್ಟಣದಲ್ಲಿ ಲಕ್ಕಣ್ಣ ವೀರಣ್ಣ ಎಂಬುವಂಥ ಇಬ್ಬರು ಮಕ್ಕಳು ಸಹಿತವಾಗಿ ಇದ್ದುಕೊಂಡು ಇದ್ದಂಥಾವಳು ಈ ದ್ವಾರಾಪುರಿಗೆ ಪಾಚ್ಛಾಯಿ ದಂಡುಯೆತ್ತಿ ಬಂದುಯಿದ್ದಾನೆಂಬ ವರ್ತಮಾನ ಕೇಳಿ ತನ್ನ ಮಕ್ಕಳನ್ನು ಕರೆದು ಕೊಂಡು ತಮ್ಮನಾದ ವೀರಬಲ್ಲಾಳರಾಯನ ನೋಡುವ ಬಗ್ಯೆ ಅಕ್ಕನಾದ ಬಲ್ಲಾಳ ದೇವಿಯು ಈ ದ್ವಾರಾಪುರಿಗೆ ಬಂದು ತನ್ನ ತಮ್ಮನ ಮನೆಯಲ್ಲಿ ಇರುತ್ತಾಯಿದ್ದಲ್ಲಿ ಒಂದಾನೊಂದು ದಿವಸದಲ್ಲಿ ವೀರಬಲ್ಲಾಳನು ಮಂದಿ ಮಾರ್ಬಲ ಸಮೇತವಾಗಿ ಬೇಂಟೆಯನಾಡುವದಕ್ಕೆ ಹೊರಟುಹೋದನು ಆ ಸಮಯದಲ್ಲಿ ಬಲ್ಲಾಳರಾಯನ ಕಿರಿಹೆಂಡತಿಯು ಅತ್ತಿಗೆಯಾದ ಬಲ್ಲಾಳದೇವಿಯ ಮಕ್ಕಳು ಚಿಕ್ಕವರಿಬ್ಬರು ಲಕ್ಕಣ್ಣ ವೀರಣ್ಣ ಎಂಬವರು ಅತಿ ಸೌಂದರ್ಯಪುರುಷರಾಗಿ ಇದ್ದ ಕಾರಣ ಅವರ ಮೇಲೆ ಭ್ರಮಿಸಿ ಅವರನ್ನು ಗೋಪ್ಯದಲ್ಲಿ ಕರೆದು ಈಗಲಾದರೆ ದೊರೆ ಸ್ವಾರಿ ಹೋಗಿದ್ದಾನೆ ನಿಮ್ಮ ಮೇಲೆ ಬಹಳ ದಿವಸದಿಂದ ನನಗೆ ಭ್ರಮೆಯುಂಟು ಈ ಸಮಯದಲ್ಲಿ ನೀವು ನನ್ನ ಮನೆಗೆ ಬಂದು ಕಾಮಕ್ರೀಡೆಯಲಿ ನಾಲ್ಕು ಘಳಿಗೆಯಿರಿಯೆಂಬದಾಗಿ ನಾನಾ ಪ್ರಕಾರ ಒಡಂಬಡಿಕೆ ಮಾಡಿದಾಗ್ಯು ಆ ಲಕ್ಕಣ್ಣ ವೀರಣ್ಣನು ಆ ನುಡಿಗಳಿಗೆ ಒಳಗಾಗದೆ ಈ ಮಹಾಪಾತಕಕ್ಕೆ ಗುರಿಯಾಗುವರಲ್ಲ ನೀನು ನಮ್ಮ ಮಾತೃಸಮಾನವೇ ಹೊರತು ಬದಲುಂಟೇ ಎಂದು ಹೇಳಿದರಿಂದ ನನ್ನ ಮಾತ ನೀವು ಕೇಳಿದರೆ ಸರಿ ಇಲ್ಲವಾಯ್ತೆ ನಿಮ್ಮ ಇಬ್ಬರನ್ನು ಶೂಲಪ್ರಾಪ್ತಿ ಮಾಡಿಸುತ್ತ ಇದ್ದೇನೆಂಬದಾಗಿ ಆಕೆಯು ಹೇಳಲು ಹಾಗಾದರು ಚಿಂತೆಯಿಲ್ಲ ಮಾತೃದ್ರೋಹಕ್ಕೆ ನಾವು ಒಳಗಾಗುವ ರಲ್ಲ ಎಂಬದಾಗಿ ಹೇಳಿ ಆಕೆಯ ಕೈಯಿಗೆ ಸಿಕ್ಕದೆ ಓಡಿಹೋದರು. ಆ ತರುವಾಯ ಬಲ್ಲಾಳರಾಯನ ಹೆಂಡತಿಯು ಈ ಅಳಿಯಂದಿರು ತನಗೆ ವಶವಾಗಲಿಲ್ಲವಾದ್ದರಿಂದ ಅತಿಕ್ಲೇಶಬಟ್ಟು ಯಾವ ತರದಿಂದಲಾದರು ಈ ಇಬ್ಬರನ್ನು ಶೂಲಪ್ರಾಪ್ತಿ ಮಾಡಿಸದೆ ಬಿಡೆನು ಎಂಬದಾಗಿ ಚಲವ ತೊಟ್ಟು ಇದಕ್ಕೆ ಏನು ಯತ್ನ ಮಾಡಲಿಯೆಂದು ತನ್ನ ಮನಸ್ಸಿನಲ್ಲಿ ಯೋಚಿಸಿಕೊಂಡು ಕೊಮಾರರಾಮನಿಗೆ ರತ್ನಿ ಹ್ಯಾಗೆ ಮಾಡಿದಳೊ. ಹಾಗೆ ಮಾಡುತ್ತೇನೆ ಎಂಬದಾಗಿ ತನ್ನ ಅಂಗಾಂಗಗಳನ್ನು ತನ್ನ ನಖಗಳಿಂದ ಗಾಯಗಳ ಮಾಡಿಕೊಂಡು ಮಲಿನ ವಸ್ತ್ರವನುಟ್ಟುಕೊಂಡು ತಲೆಯನ್ನು ಕೆದರಿಕೊಂಡು ಅಂತಃಪುರದಲ್ಲಿ ಹಾಸಿಗೆ ಹೊದ್ದದನೆ ನೆಲದ ಮೇಲೆ ಮೊಕಾಡೆಯಾಗಿ ಕಣ್ಣಿನಿಂದ ಧಾರಾವರ್ತವಾಗಿ ನೀರು ಸುರಿಸುತ್ತ ಸಂತೋಷವರ್ಜಿತಳಾಗಿ ಅತಿದುಃಖದಿಂದ ಮಲಗಿದ್ದಳು ಇತ್ತಲಾ ಬಲ್ಲಾಳರಾಯನು ಬೇಂಟೆಯನಾಡಿಕೊಂಡು ಅಸ್ತಮಯ ಸಮಯಕ್ಕೆ ಪಟ್ಣಪ್ರವೇಶವಾಗಿ ಅರಮನೆಗೆ ಬಂದು ಕುಳಿತುಕೊಂಡು ತನ್ನ ಮೋಹದ ಕಿರಿಹೆಂಡತಿಯನ್ನು ಕಾಣದೆ ಅಂತಃಪುರಕ್ಕೆ ಹೋಗಿ ನೋಡಿದಲ್ಲಿ ವಿಕಾರವಾಗಿ ಮಲಗಿರುವಂಥ ಹೆಂಡತಿಯನ್ನು ಕಂಡು ಇದೇನು ಆಶ್ಚರ್ಯವೆಂದು ಹೆಂಡತಿಯನ್ನು

ಕೇಳಿದಲ್ಲಿ ಆಗ ಆಕೆಯು ಅತಿದುಃಖಿತೆಯಾಗಿ ಮಾತನಾಡದೇ ಇದ್ದ ಕಾರಣ ನಿನ್ನ ಮನಸ್ಸಿನಲ್ಲಿ ಇದ್ದ ಹಾಗೆ ನಡೆದುಕೊಳ್ಳುತ್ತ ಇದ್ದೇನೆ ಎಂಬದಾಗಿ ಹೇಳಿದರಿಂದ ಆಗ್ಯೆ ತನ್ನ ಗಂಡನ ಸಂಗಡ ಅಭಯುವನ್ನು ತೆಗೆದುಕೊಂಡು ನಿನ್ನ ಅಳಿಯಂದಿರು ನೀನು ಹೊರಟುಹೋದ ಸಮಯ ನೋಡಿ ತನ್ನ ವಯೋ ರೂಪು ಲಾವಣ್ಯವಂ ಕಂಡು ಅವರು ಸೈರಿಸಲಾರದೆ ಬಲಾತ್ಕಾರದಿಂದ ತನ್ನ ಮೈ ಕೈ ಹಿಡಿದು ತಾನು ವಶವಾಗದೆ ಯಿದ್ದ ಕಾರಣ ಶರೀರ ಯಾವತ್ತನ್ನು ಗಾಯಗಳ ಮಾಡಿಬಿಟ್ಟು ಹೋದರು ಆದ ಕಾರಣ ಅವರ ಮುಖಾವಲೋಕನವ ಮಾಡಬಾರದು ಈ ಕ್ಷಣವೆ ಅವರನ್ನು ಶೂಲಕ್ಕೆ ಹಾಕಿಸಿದರೆ ಸರಿ ಇಲ್ಲವಾಯ್ತು ನಾನು ಪ್ರಾಣತ್ಯಾಗವ ಮಾಡಿಕೊಳ್ಳುತ್ತ ಯಿದ್ದೇನೆ ಎಂಬದಾಗಿ ಹೇಳಿದ ಕಾರಣ ಈ ಮಾತು ಕಿವಿಗೆ ಬೀಳಲು ಅತಿಕೋಪಾಟೋಪ ದಿಂದ ಪಾಪಪುಣ್ಯಗಳನು ನೋಡದೆ ಅವರು ಈ ದುರ್ವರ್ತನೆಯನ್ನು ಮಾಡಿದರೊ ಇಲ್ಲವೊ ಎಂಬುದನ್ನು ತಾ ವಿಚಾರಿಸದೆ ಆ ಕ್ಷಣದಲ್ಲಿಯೆ ಆ ಲಕ್ಕಣ್ಣ ಈರಣ್ಣ ಎಂಬುವಂಥ ಸೋದರ ಅಳಿಯಂದಿರನು ಎಳಕೊಂಡು ಹೋಗಿ ಶೂಲಕ್ಕೆ ಹಾಕಿಬಿಡಿ ಎಂದು ಚರರಿಗೆ ನೇಮಿಸಲಾಗಿ ಆ ಚರರು ಅರಸಿನ ಆಜ್ಞೆಯ ಮೀರಕೂಡದ ಕಾರಣ ಆ ಕ್ಷಣದಲ್ಲಿಯೇ ಅವರನು ಎಳಕೊಂಡು ಬಂದು ಪುನಹ ಅಪ್ಪಣೆಯನ್ನು ಕೇಳಿದಲ್ಲಿ ಮತ್ತೂ ಅದೇ ಪ್ರಕಾರಕ್ಕೆ ಅಪ್ಪಣೆ ಕೊಟ್ಟ ಕಾರಣ ಈ ಪಟ್ಟಣಕ್ಕೆ ದಕ್ಷಿಣ ದಿಕ್ಕಿನಲ್ಲಿ ಇರುವ ಭೈರವಬೆಟ್ಟಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಶೂಲದ ಮರಗಳ ನೆಡಿಸಿ ಪುನಃ ಆ ಚರರು ಬಂದು ಅಪ್ಪಣೆಯನ್ನು ಕೇಳಲಾಗಿ ಮತ್ತೂ ಕೋಪದಿಂದ ಈ ಕ್ಷಣವೆ ಹಾಕಿಬಿಡಿಯೆಂದು ಅಪ್ಪಣೆ ಕೊಟ್ಟದ್ದರಿಂದ ಆ ಚರರು ಈ ಲಕ್ಕಣ್ಣ ವೀರಣ್ಣನ ಸಹ ಕೂಡಿಕೊಂಡು ಬಂದು ಶೂಲದ ಮರಕ್ಕೆ ಏರಿಸಿಬಿಟ್ಟು ಬಂದು ದೊರೆಯೆ ಹಾಕಿಬಿಟ್ಟೆ ವೆಂಬದಾಗಿ ಹೇಳಿದಲ್ಲಿ ಒಳ್ಳೆದಾಯ್ತುಯಂತ ಸಂತೋಷಬಟ್ಟಂಥಾವರಾದರು ಅನಂತರದಲ್ಲಿ ಈ ಸಮಾಚಾರವನು ಈ ಲಕ್ಕಣ್ಣನ ತಾಯಿ ಬಲ್ಲಾಳದೇವಿಯು ಕೇಳಿ ಅತಿದುಃಖಿತೆಯಾಗಿ ನಿರಪರಾಧಿಗಳಾದಂಥ ತನ್ನ ಮಕ್ಕಳನ್ನು ತನ್ನ ತಮ್ಮನಾದ ಬಲ್ಲಾಳರಾಯನು ಶೂಲಕ್ಕೆ ಹಾಕಿಸಿಬಿಟ್ಟನೆಂದು ಅಂಥಾ ಮಕ್ಕಳು ಹೋದಮೇಲೆ ತನ್ನ ಶರೀರವನ್ನು ಇಟ್ಟುಕೊಂಬುವಂಥಾದು ಯಿಲ್ಲ ತಾನು ತನ್ನ ಮಕ್ಕಳು ಬಿದ್ದಂತಾ ಶೂಲಕ್ಕೆ ಬೀಳುತ್ತೇನೆಯೆಂದು ಆ ಪಟ್ಟಣ ರಾಜಬೀದಿ ಮುಂತಾದ ಸಮಸ್ತ ಬೀದಿಯಲ್ಲು ವದನತಾಡನ ಮಾಡಿಕೊಂಡು ಕುಂಬಾರರು ಇರುವಂತಾ ಬೀದಿಗೆ ಬರುವಲ್ಲಿ ಶ್ರಮದಿಂದ ಅತಿದಾಹವಾದ ಕಾರಣ ಎಲೈ ಪುಣ್ಯಾತ್ಮರಿರ ನನಗೆ ದಾಹ ವಾಗುತ್ತಯಿದೆ ನಾನಾದರೆ ಶೂಲಕ್ಕೆ ಬೀಳುತ್ತಯಿದ್ದೇನೆ ನೀರನಾದರು ತೆಗೆದು ಕೊಂಡು ಸತ್ತೇನು ಎಂಬದಾಗಿ ಈ ಬಲ್ಲಾಳದೇವಿಯು ಕೇಳಿದಲ್ಲಿ ಆದರಲ್ಲಿ ಒಬ್ಬ ಕುಂಬಾರನು ಅತಿಸಂತಾಪಬಟ್ಟು ನಿರಪರಾಧಿಗಳಾದ ನಿನ್ನ ಮಕ್ಕಳನ್ನು ಅತಿಕ್ರೂರ ದಿಂದ ಹೆಂಡತಿಯ ಮಾತ ಕೇಳಿ ಅರಸು ಶೂಲಕ್ಕೆ ಹಾಕಿಸಿಬಿಟ್ಟನೆಂದು ಅವನು

ಬಹುದುಃಖಿತನಾಗಿ ತಾಯಿ ಶಾಪವ ಪರಿಹರಿಸಿಕೊ ಎಂದು ಒಳ್ಳೆ ಗಂಗೋದಕವನ್ನು ತಂದುಕೊಟ್ಟಲ್ಲಿ ಆಕೆಯು ಆ ಗಂಗೋದಕವನ್ನು ತೆಗೆದುಕೊಂಡು ತನ್ನ ದಾಹ ಶಾಂತವಾದ ಬಳಿಕ ಶಾಪವ ಕೊಟ್ಟದ್ದು—ಈ ಪಟ್ಟಣವು ಹಾಳಾಗಲಿ ಕುಂಬಾರ ಬೀದಿ ಮಾತ್ರ ಊರಾಗಲಿ ಎಂದು ಶಾಪವನಿತ್ತು ಮಕ್ಕಳನ್ನು ಅರಸಿಕೊಂಡು ಭೈರವನ ಬೆಟ್ಟಕ್ಕೆ ಹೋಗಿ ಮಕ್ಕಳು ಬಿದ್ದಿರುವಂಥ ಶೂಲದ ಮರವನ್ನು ಕಂಡು ತಾನು ಆ ಶೂಲದ ಮರವನ್ನು ಹತ್ತಿ ನಾನು ಸತ್ಯವಂತೆ ಆದರೆ ಈ ಶೂಲದ ಮರವು ಈ ಪಟ್ಟಣದ ಊರ ಮುಂದಕ್ಕೆ ನಡೆಯಲಿಯೆಂತ ಹೇಳಿಬಿಟ್ಟು ಆಕೆಯು ಆ ಶೂಲಕ್ಕೆ ಬಿದ್ದಳು ಅನಂತರದಲ್ಲಿ ಈ ವೃತ್ತಾಂತ ಯಾವತ್ತನ್ನು ಎರಡು ಯೋಜನದ ಮೇಲೆ ಇಳಿದುಕೊಂಡು ಇರುವಂಥ ಇದ್ದ ಪಾಚ್ಛಾಯಿಯು ಕೇಳಿ ನಮಗೆ ಇದೇ ಸಮಯವು ನಿರಪರಾಧಿಗಳಾದ ಮಕ್ಕಳನ್ನು ಶೂಲಕ್ಕೆ ಹಾಕಿಸಿದ ಕಾರಣ ಆ ಬಲ್ಲಾಳ ದೇವಿಯು ಶಾಪವನ್ನು ಕೊಟ್ಟು ಯಿದ್ದಾಳೆ ಆ ಬಲ್ಲಾಳರಾಯಗೆ ಮೃತ್ಯು ಬರುವಂಥ ಸಮಯವಾಯಿತ್ತು ಈ ವ್ಯಾಳದಲ್ಲಿ ಈ ಪಟ್ಟಣಕ್ಕೆ ಮುತ್ತಿಗೆ ಹಾಕಿದರೆ ನಮಗೆ ಜಯಪ್ರದವಾದೀತು ಎಂಬದಾಗಿ ಯೋಚಿಸಿ ತನ್ನ ಮಂದಿ ಮಾರ್ಬಲ ಯಾವತ್ತನ್ನು ತೆಗೆದುಕೊಂಡು ಬಂದು ಈ ಪಟ್ಟಣಕ್ಕೆ ಮುತ್ತಿಗೆ ಹಾಕಿದಲ್ಲಿ ಈ ಬಲ್ಲಾಳರಾಯನು ತಿಳಿದು ಮೊದಲಿನ ಹಾಗೆ ತನಗೆ ಜಯಪ್ರದವಾದೀತೆಂದು ತಾನೇ ಯೋಚಿಸಿಕೊಂಡು ತನ್ನ ಮಾರ್ಬಲ ಸಹಿತವಾಗಿ ಪಟ್ಟಣವ ಹೊರವಟ್ಟು ಆ ಪಾಚ್ಛಾಯನ ದಂಡಿನ ಮೇಲೆ ಯುದ್ಧವ ಮಾಡಲಾಗಿ ಈ ಬಲ್ಲಾಳದೇವಿಯಿತ್ತ ಶಾಪದ ನಿಮಿತ್ಯದಿಂದ ಈ ಬಲ್ಲಾಳರಾಯಗೆ ಸತ್ವ ಕುಂದಿ ಅಧೈರ್ಯ ಹುಟ್ಟಿದ ಕಾರಣ ಈ ರಾಯನು ತಾನಿಂತು ಯುದ್ಧವ ಮಾಡದೆ ಅಪಜಯದಿಂದ ಚಂದ್ರದ್ರೋಣ ಪರ್ವತದ ಕಡೆಗೆ ತನ್ನ ಮಾರ್ಬಲವನ್ನು ಕಟ್ಟಿಕೊಂಡು ಓಡಿಹೋಗಲಾಗಿ ಈ ಪಾಚ್ಛಾಯು ಬಲ್ಲಾಳರಾಯನ ಹಿಡೀದೇ ಹೊರ್ತು ಬಿಡುವದಿಲ್ಲವೆಂದು ಪ್ರತಿಜ್ಞೆಯಂ ಮಾಡಿಕೊಂಡು ಆತನ ಬೆನ್ನ ಹತ್ತಲಾಗಿ ಈ ಬಲ್ಲಾಳರಾಯನು ನಿರ್ವಹಿಸಲಾರದೆ ಚಂದ್ರದ್ರೋಣ ಪರ್ವತಕ್ಕೆ ಹತ್ತಬೇಕುಯೆಂದು ಹತ್ತಲಾಗಿ ಆ ಪರ್ವತದಲ್ಲಿ ಸೂಜಿಕಲ್ಲುಗಳುಂಟಾಗಿಯಿದ್ದ ಕಾರಣ ಕುದುರೆಯ ಕಾಲ್ಗಳಲ್ಲಿ ಕಬ್ಬಿಣದ ಹಲ್ಲೆಗಳು ಕಟ್ಟಿದವು ಕುದುರೆಗಳು ಪರ್ವತವ ಹತ್ತುವದಕ್ಕೆ ಸೂಜಿಕಲ್ಲುಗಳು ಬಂಧಿಸುವದಾದ ಕಾರಣ ಆ ಕುದುರೆಗಳು ಹತ್ತಲಾರದೆ ನಿಲ್ಲಲಾಗಿ ಈ ವಿವರಗಳನ್ನು ಬಲ್ಲಾಳರಾಯನು ತಿಳಿದು ಆ ಲೋಹದ ಹಲ್ಲೆಗಳನ್ನು ಕೀಳಿಸಿಬಿಟ್ಟು ಸುವರ್ಣದ ಹಲ್ಲೆಗಳನ್ನು ಮಾಡ್ಸಿ ಕುದುರೆಗಳ ಕಾಲ್ಗಳಿಗೆ ಹಾಕಿಸಿಬಿಟ್ಟು ಫೌಜು ಸಹ ಚಂದ್ರದ್ರೋಣ ಪರ್ವತಕ್ಕೆ ಹತ್ತಲಾಗಿ ಈ ಪಾಚ್ಛಾಯಿಯು ಈ ಬಲ್ಲಾಳರಾಯನ ಹಿಡಿದೊರ್ತು ಬಿಡುವದುಯಿಲ್ಲ ಎಂಬದಾಗಿ ಪ್ರತಿಜ್ಞೆಯ ಮಾಡಿಕೊಂಡು ಎಲಾ ಬಲ್ಲಾಳರಾಯನೆ ನೀನು ಭೂಮಿಯನ್ನು ಬಗೆದು ಹೊಕ್ಕಾಗ್ಯು ಬಿಡುವದಿಲ್ಲ ಈ ಬಗ್ಗೆ ನಾನು ಪ್ರತಿಜ್ಞೆಯನ್ನು ಮಾಡಿ ಯಿದ್ದೇನೆ ನೀನು ಎಲ್ಲಿ

ಹೋದಿ ಎಂದು ಅಟ್ಟಿಕೊಂಡು ಹೋದಲ್ಲಿ ಬಲ್ಲಾಳರಾಯನು ಬಹು ಬಳಲಿ ಧೈರ್ಯ ಕುಂದಿ ಅಲ್ಲಿ ಭೂಮಿದೇವಿಯನ್ನು ಪ್ರಾರ್ಥನೆಯನ್ನು ಮಾಡಿಕೊಂಡು ಏ ತಾಯೆ ಭೂದೇವಿಯೆ ನನ್ನ ನಿನ್ನಲ್ಲಾದರು ಇಟ್ಟುಕೋ ಯೆಂದು ಬಹಳವಾಗಿ ಸ್ತೋತ್ರವಂ ಮಾಡಲಾಗಿ ಭೂದೇವಿಯು ಬಲ್ಲಾಳರಾಯನ ಮೇಲೆ ಕರುಣಾಕಟಾಕ್ಷ ವಿಟ್ಟು ಬಾಯ್ದೆಗೆದು ಮಾರ್ಗವ ಕೊಡಲು ಈ ಬಲ್ಲಾಳರಾಯನು ತನ್ನ ಮಾರ್ಬಲ ಸಹವಾಗಿ ತಾನು ಭೂಮಿವಳಯಿಂಕೆ ಹೋದನು ತದನಂತರದಲ್ಲಿ ಆ ಭೂದೇವಿಯು ಮಾರ್ಗವ ಮುಚ್ಚಿಕೊಂಡು ಬಿಟ್ಟಳು ಗವಾಕ್ಷಿಯೋಪಾದಿಯಲ್ಲಿ ದ್ವಾರ ಮಾತ್ರ ಕಾಣುತ್ತಯಿದೆ ಹಿಂದಳಿಂದ ಅಟ್ಟಿಕೊಂಡು ಬಂದಂಥ ಈ ಪಾಚ್ಛಾಯಿಯು ಈ ಬಲ್ಲಾಳರಾಯನು ಹೋದಂಥ ಮಾರ್ಗವನ್ನೆ ನಿರೀಕ್ಷಿಸಿಕೊಂಡು ಅಲ್ಲೆ ಕಾದುಕೊಂಡು ಕೆಲವು ದಿನ ಇದ್ದುಕೊಂಡುಯಿರುತ್ತ ಇರುವಾಗ್ಯೆ ಅಲ್ಲೆ ದೈವಾಧೀನನಾದನು ಆ ಬಳಿಕ ಅವಗೆ ಅಲ್ಲೆ ಗೋರಿ ಮಾಡಿಬಿಟ್ಟರು ತದನಂತರ ಪಾಚ್ಛಾಯಿ ಕಡೆಯ ಮಂತ್ರಿ ಪ್ರಧಾನಿಗಳು ಉಳಿದಂಥ ಮಂದಿ ಮಾರ್ಬಲವನ್ನು ಕರೆದುಕೊಂಡು ತಮ್ಮ ಸ್ಥಳವಾದ ಡಿಲ್ಲಿಗೆ ಹೋದರು.

ತದನಂತರ ಇತ್ತಲಾಗಿ ಈ ದ್ವಾರಾಪುರಿಯು ಖಿಲವಾಗಿ ಹೋಗಿ ಈ ಕುಂಬಾರ ಬೀದಿ ಮಾತ್ರ ಊರಾಗಿ ಹಳೇಬೀಡೆಂಬ ನಾಮಧೇಯವಾಯ್ತು ಈಚೆಗೆ ವಿಜಯ ನಗರ ಸಂಸ್ಥಾನವನ್ನು ವಿದ್ಯಾರಣ್ಯರು ಉದ್ಧಾರ ಮಾಡಿ ಕ್ಷತ್ರಿಯ ವಂಶದ ಹಕ್ಕಬುಕ್ಕ ರಾಯರೆಂಬುವರಿಗೆ ಪಟ್ಟವ ಕಟ್ಟಿದರು ಆ ಬಳಿಕ ಆ ರಾಯರು ಅನೇಕ ಸಂಸ್ಥಾನ ವನ್ನು ಕಟ್ಟಿದರು ಆ ವಂಶದವರು ಹರಿಹರ ಮಹಾರಾಯ ಬುಕ್ಕರಾಯರು ಅನೇಕ ಗ್ರಾಮಂಗಳ ಬಿಟ್ಟರು ಅನೇಕ ಅಗ್ರಹಾರಗಳ ಕಟ್ಟಿಸಿ ಸ್ವಾಸ್ತಿಗಳಿಂದ ಬಿಟ್ಟರು ಅವರ ಸಂತತಿ ಅಚ್ಯುತರಾಯರು ಕೃಷ್ಣರಾಯರು ಶ್ರೀರಂಗರಾಯರು ಸಂಸ್ಥಾನವ ಆಳಿದರು ಆ ಸಂಸ್ಥಾನದೊಳಗೆ ಬೇಲೂರು ಮೂರುಲಕ್ಷ ಸೀಮೆಯ ಪಿಂಗಡಿಸಿ ವೀಣೆ ಅನಂತಯ್ಯಗೆ ಇನಾಮು ಕೊಟ್ಟು ಆ ಅನಂತಯ್ಯನಿಂದ ನಿರ್ವಾಹವಿಲ್ಲದೆ ಪುನಹ ರಾಯರಿಗೆ ಹೇಳಿಕೊಂಡಲ್ಲಿ ತಮ್ಮ ಕಡೆಯಿಂದ ಊಳಿಗದ ವೆಂಗಟಾದ್ರಿ ನಾಯಕನ ಕಳುಹಿಸಿದರು ಈ ವೆಂಕಟಾದ್ರಿನಾಯಕರು ಈ ಅನಂತಯ್ಯನವರ ಕೈಯಿಂದ ಕ್ರಯಕ್ಕೆ ತೆಗೆದುಕೊಂಡು ಯಿರುತ್ತ ಯಿದ್ದಲ್ಲಿ ಅದನು ಇಕ್ಕೇರಿಯವರು ಕಟ್ಟಿಕೊಂಡು ಪುನಹಾ ವಿಜಯನಗರ ಸಂಸ್ಥಾನವನ್ನು ಪಾಚ್ಛಾಯಿ ತೆಗೆದು ಕೊಳ್ಳಲಾಗಿ ಶ್ರೀರಂಗರಾಯರು ಹೊರಟು ಬಂದು ಇಕ್ಕೇರಿಯವರಿಗೆ ಹೇಳಿ ಕಳುಹಿಸ ಲಾಗಿ ಶಿವಪ್ಪನಾಯ್ಕನು ಶ್ರೀರಂಗನಾಯ್ಕನ ಕರೆದುಕೊಂಡು ಬಂದು ಈ ಬೇಲೂರು ಸಂಸ್ಥಾನವನ್ನು ಕೊಟ್ಟನು ಪುನಹಾ ಪಾಚ್ಛಾಯಿ ಬಗೆಯ ಮಹಿಸನ್‌ಖಾನ್‌ನೆಂಬ ವನು ಬಂದು ಏಳು ವರುಷ ಆಳಿದನು ಪುನಹ ಇಕ್ಕೇರಿಯವರು ಕಟ್ಟಿಕೊಂಡರು ಇವರಿಂದ ಮಹಿಸೂರವರು ಕಟ್ಟಿಕೊಂಡು ಇದ್ದಾರೆ. ○

# ಅರ್ಥಶಾಸ್ತ್ರದ ಅವಲೋಕನ : ಕರ್ತೃ ಮತ್ತು ಕೃತಿ

—ಆರ್. ಎಸ್. ಶಿವಗಣೇಶಮೂರ್ತಿ

ಪ್ರಾಚೀನ ಭಾರತದಲ್ಲಿ ಹಲವಾರು ಶಾಸ್ತ್ರಗಳು ಹುಟ್ಟಿದವು. ಕೆಲವು ಶಾಸ್ತ್ರಗಳು ಮಾನವರ ಪ್ರವೃತ್ತಿಯನ್ನು ಅಧ್ಯಯನಮಾಡಿ ಮಾನವರು ಪಡೆಯಲಿಚ್ಛಿಸುವಂಥವುಗಳನ್ನು ವಿಶ್ಲೇಷಿಸಿವೆ. ಅವುಗಳನ್ನು ಪುರುಷಾರ್ಥ ಎಂದು ಕರೆಯಲಾಯಿತು. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ—ಇವುಗಳು ಆ ಪುರುಷಾರ್ಥಗಳು. ಈ ಒಂದೊಂದನ್ನೂ ವಿಸ್ತರಿಸಿ, ಅವುಗಳ ಸ್ವರೂಪ ಹಾಗು ಅವನ್ನು ಸಾಧಿಸುವ ಮಾರ್ಗ ಇತ್ಯಾದಿಗಳನ್ನು ವಿವರಿಸಲಾಗಿದೆ. ನಾಲ್ಕು ಶಾಸ್ತ್ರಗಳಲ್ಲಿ ಧರ್ಮಶಾಸ್ತ್ರ – ಮೋಕ್ಷಶಾಸ್ತ್ರಗಳು ವಿಪುಲವಾಗಿ ಬೆಳೆದಿವೆ. ಧರ್ಮಶಾಸ್ತ್ರ ಸಮಾಜದ ಜನರ ಕರ್ತವ್ಯಗಳನ್ನೂ ಕಟ್ಟುಪಾಡುಗಳನ್ನೂ ಬಣ್ಣಿಸುತ್ತದೆ. ಮೋಕ್ಷಶಾಸ್ತ್ರ ಎಂದರೆ ದರ್ಶನಗಳು. ಇದರಲ್ಲಿ ಲೋಕದ ನೈಜಸ್ವರೂಪ, ಉದ್ದೇಶ, ಲೋಕದಲ್ಲಿ ಕಂಡುಬರುವ ದುಃಖಕ್ಕೆ ಕಾರಣ, ಆ ದುಃಖವನ್ನು ಬೇರುಸಹಿತ ಕಿತ್ತೊಗೆಯುವ ಉಪಾಯಗಳು, ಮೋಕ್ಷಸ್ವರೂಪ ಇತ್ಯಾದಿ ಚರ್ಚಿತವಾಗಿವೆ. ಇವೆರಡು ಶಾಸ್ತ್ರಗಳನ್ನು ಅತ್ಯಂತ ಮುಖ್ಯವೆಂದು ಪರಿಗಣಿಸಲಾಗಿದೆ. ಇವುಗಳಿಗೆ ವಿರೋಧ ಬಾರದಂತೆ ಅರ್ಥಕಾಮಗಳನ್ನು ಸಾಧಿಸಬೇಕೆಂದು ಭಾವಿಸಿ, ಇವೆರಡನ್ನು ಗೌಣವಾಗಿ ಕಂಡರು. ಅದಕ್ಕನುಗುಣವಾಗಿ ಇವೆರಡನ್ನು ಕುರಿತ ಶಾಸ್ತ್ರಗಳಲ್ಲಿನ ಗ್ರಂಥಸಂಖ್ಯೆ ಬಹು ವಿರಳ.

ಅರ್ಥಶಾಸ್ತ್ರವೆಂದರೆ ಪುರುಷಾರ್ಥಗಳಲ್ಲಿ ಒಂದಾದ 'ಅರ್ಥ'ವನ್ನು ಕುರಿತ ಶಾಸ್ತ್ರ. ಈ ಅಭಿಪ್ರಾಯವನ್ನು 'ನೀತಿವಾಕ್ಯಾಮೃತ'ದಲ್ಲಿನ 'ಯತಃ ಸರ್ವಪ್ರಯೋಜನ ಸಿದ್ಧಿಃ' [ಯಾವುದರಿಂದ ಎಲ್ಲ ಪ್ರಯೋಜನಗಳು ದೊರಕುತ್ತವೆಯೋ ಅದೇ ಅರ್ಥ.] ಎಂಬ ಸೋಮದೇವನ ಮಾತು ಪುಷ್ಟೀಕರಿಸುತ್ತದೆ. ಮನುಷ್ಯರ ವೃತ್ತಿ ಎಂದರೆ 'ಬದುಕಲು ಆವಶ್ಯಕವಾದುದು'. ಅರ್ಥ ಎಂದರೆ, ಮನುಷ್ಯರೊಡಗೂಡಿದ ಭೂಮಿ—'ಮನುಷ್ಯವತೀ ಭೂಮಿಃ' ಎಂದರೆ, ಫಲವತ್ತಾದ ಭೂಮಿ (ಅಧ್ಯಾಯ 150) ಎಂದು ಕೌಟಿಲ್ಯ ಹೇಳುತ್ತಾನೆ. 'ನ ಹಿ ಧಾನ್ಯಸಮೋ ಅರ್ಥಃ' ಎಂಬ ಚಾಣಕ್ಯ–ನೀತಿ ಸೂತ್ರದ (276) ಪಂಕ್ತಿಯೂ ಇದೇ ಅಭಿಪ್ರಾಯವನ್ನು ಪ್ರತಿಬಿಂಬಿಸುತ್ತದೆ. ಅಂಥ ಅರ್ಥವನ್ನು ಪಡೆಯಲು ಮತ್ತು ಉಳಿಸಿಕೊಳ್ಳಲು ಉಪಾಯಗಳನ್ನು ತಿಳಿಸುವ ಶಾಸ್ತ್ರ, ಅರ್ಥಶಾಸ್ತ್ರ.

ಅರ್ಥಶಾಸ್ತ್ರವನ್ನು ರಾಜನೀತಿಶಾಸ್ತ್ರವೆಂದೂ ತಿಳಿಯಲಾಗಿದೆ. ನೀತಿಶಾಸ್ತ್ರವೆಂದರೆ ಸರ್ವರಿಗೂ ಅನ್ವಯವಾಗುವಂತೆ ಸರ್ವಸಾಮಾನ್ಯ ಮಾತುಗಳಲ್ಲಿ ನಿರೂಪಿತವಾದ ಮಾರ್ಗದರ್ಶಕ ತತ್ತ್ವಗಳು ಎಂದಾಗುತ್ತದೆ. ಅದರಲ್ಲಿ ಗಾದೆಗಳಂಥ ಮಾತುಗಳೂ ಸೇರುತ್ತವೆ. ಇವೆಲ್ಲ ರಾಜನೀತಿ ಅಥವಾ ಅರ್ಥಶಾಸ್ತ್ರದಲ್ಲಿಯೂ

ಸೇರುತ್ತವೆ. ಆದರೆ ಇಲ್ಲಿ ರಾಜನಿಗೆ ಅನ್ವಯವಾಗುವಂತೆ, ಒಂದು ರಾಜ್ಯದ ಆಡಳಿತಕ್ಕೆ ಅನ್ವಯವಾಗುವಂತೆ ತಿಳಿಯ ಹೇಳಲಾಗುತ್ತದೆ. ಅರ್ಥಶಾಸ್ತ್ರವನ್ನು ಅಥರ್ವವೇದದ ಉಪವೇದವೆಂದೂ ಪರಿಗಣಿಸಲಾಗಿದೆ.

ಇಂಥ ಅರ್ಥಶಾಸ್ತ್ರದಲ್ಲಿ ನಮಗೆ ಈಗ ಉಪಲಬ್ಧವಾಗಿರುವ ಪ್ರಾಚೀನತಮ ಕೃತಿ ಎಂದರೆ, ಕೌಟಿಲ್ಯನ 'ಅರ್ಥಶಾಸ್ತ್ರ'. ಕರ್ತೃವಾದ ಕೌಟಿಲ್ಯನ ಬಗೆಗೆ ನಮಗೆ ತಿಳಿದಿರುವ ಅಂಶಗಳನ್ನು ಈ ಕೃತಿಯ ವಿಷಯ ವೈವಿಧ್ಯ ವೈಶಿಷ್ಟ್ಯಗಳನ್ನು ಇಲ್ಲಿ ಪ್ರಸ್ತಾವಿಸಲಾಗುತ್ತದೆ.

**ಕರ್ತೃ :** 'ಅರ್ಥಶಾಸ್ತ್ರ' ಕೃತಿ ರಚಿಸಿದವನು ಕೌಟಿಲ್ಯ ಎಂದು ಕೃತಿಯಿಂದಲೇ ತಿಳಿಯುತ್ತದೆ. 'ಕೌಟಿಲೀಯೇ ಅರ್ಥಶಾಸ್ತ್ರೇ' ಎಂದು ಪುಷ್ಪಿಕೆಯಲ್ಲಿದೆ. ಮೊದಲ ಅಧ್ಯಾಯದ ಕೊನೆಯಲ್ಲಿ 'ಕೌಟಿಲ್ಯೇನ ಕೃತಂ ಶಾಸ್ತ್ರಂ' ಎಂದೂ 31ನೇ ಅಧ್ಯಾಯದ ಕೊನೆಯಲ್ಲಿ 'ಕೌಟಿಲ್ಯೇನ ನರೇಂದ್ರಾರ್ಥೇ ಶಾಸನಸ್ಯ ವಿಧಿಃ ಕೃತಃ' ಎಂದೂ ಇದೆ. ಗ್ರಂಥಾಂತ್ಯದಲ್ಲಿ 'ಸ್ವಯಮೇವ ವಿಷ್ಣುಗುಪ್ತಃ ಚಕಾರ ಸೂತ್ರಂ ಚ ಭಾಷ್ಯಂ ಚ' ಎಂದು ಹೇಳಿದೆಯಾಗಿ ಕರ್ತೃವಿಗೆ ವಿಷ್ಣುಗುಪ್ತ ಎಂಬ ಹೆಸರೂ ಇತ್ತೆಂದು ತಿಳಿಯುತ್ತದೆ. ಇವನನ್ನು ಚಾಣಕ್ಯನೆಂದೂ ಕರೆಯಲಾಗಿದೆ. ವಿಷ್ಣುಗುಪ್ತ ಅವನಿಗೆ ಇಟ್ಟ ಹೆಸರು. ಕುಟಿಲ ಗೋತ್ರದವನಾದ್ದರಿಂದ ಕೌಟಿಲ್ಯ ಎಂದೆನಿಸುತ್ತಾನೆ. ಚಾಣಕ್ಯ ಎಂದರೆ ಚಣಕ ದೇಶದವನೆಂದರ್ಥ. ಕಾಮಂದಕ ತನ್ನ 'ನೀತಿಸಾರ'ದ ಪೀಠಿಕೆಯಲ್ಲಿ,

"ನೀತಿಶಾಸ್ತ್ರಾಮೃತಂ ಧೀಮಾನ್ ಅರ್ಥಶಾಸ್ತ್ರಮಹೋದಧೇಃ ।
ಯ ಉದ್ದಧೇ ನಮಸ್ತಸ್ಮೈ ವಿಷ್ಣುಗುಪ್ತಾಯ ವೇಧಸೇ ॥"

ಎಂದು ಗೌರವ ಸೂಚಿಸಿದ್ದಾನೆ. ಅದರ ವ್ಯಾಖ್ಯೆ 'ಜಯಮಂಗಲಾ' ಹೀಗೆ ವಿವರಿಸುತ್ತದೆ :

"ವಿಷ್ಣುಗುಪ್ತ ಇತಿ ಸಾಂಸ್ಕಾರಿಕೀ ಸಂಜ್ಞಾ ; ಚಾಣಕ್ಯಃ ಕೌಟಿಲ್ಯಃ ಇತಿ ದ್ವೇ
ಜನ್ಮಭೂಮಿ ಗೋತ್ರ ನಿಬಂಧನೇ ।"

'ದಶಕುಮಾರ ಚರಿತ'ದಲ್ಲಿ :

"ಅಧೀಷ್ವ ತಾವತ್ ದಂಡ ನೀತಿಂ ; ಇಯಮಿದಾನೀಂ ವಿಷ್ಣುಗುಪ್ತೇನ
ಮೌರ್ಯಾರ್ಥೇ ಷಡ್‌ಭಿಃ ಶ್ಲೋಕಸಹಸ್ರೈಃ ಸಂಕ್ಷಿಪ್ತಾ ।"

ಎಂದೂ, 'ಕೌಟಿಲ್ಯಶಾಸ್ತ್ರ' ಎಂದು ಬಾಣನಿಂದಲೂ

"ಅರ್ಥಶಾಸ್ತ್ರಾಣಿ ಚಾಣಕ್ಯಾದೀನಿ"

ಎಂದು ಪಂಚತಂತ್ರದಲ್ಲಿಯೂ ಈ ಕೃತಿಗೆ ಸೂಚನೆಯಿದೆ.

ತನ್ನ ಹಿಂದಿನ ಆಚಾರ್ಯರಿಗಿಂತ ಭಿನ್ನವಾದ ನಿಲುವು ತಳೆದಾಗೆಲ್ಲ 'ಇತಿ ಕೌಟಿಲ್ಯಃ' ಎಂದು ಈತ ಸ್ಪಷ್ಟಪಡಿಸುತ್ತಾನೆ. ಇದನ್ನು ಗಮನಿಸಿದ ಕೆಲವು

ವಿದ್ವಾಂಸರು ಈ ಕೃತಿಯನ್ನು ಕೌಟಿಲ್ಯ ಬರೆಯಲಿಲ್ಲ. ಅವನ ಶಿಷ್ಯನಾರೋ ಬರೆದಿರಬೇಕು. ಏಕೆಂದರೆ, ಕರ್ತೃ ತನ್ನ ಹೆಸರು ಹೇಳಿಕೊಳ್ಳುವುದು ಅನುಚಿತ ಎನ್ನುತ್ತಾರೆ. ಈ ಅಭಿಪ್ರಾಯ ಸಮಂಜಸವಲ್ಲ. ಗೋತ್ರನಾಮದಿಂದ ತಮ್ಮ ಹೆಸರು ಸೂಚಿಸುವುದು ಪ್ರಾಚೀನ ಶಾಸ್ತ್ರಕಾರರ ಒಂದು ಪರಿಪಾಟಿ. ಉದಾಹರಣೆಗೆ : ಪತಂಜಲಿಯ 'ಮಹಾಭಾಷ್ಯ'ದಲ್ಲಿ ಗೋನರ್ದೀಯಃ ಎಂದೂ. 'ಬೋಧಾಯನ ಕಲ್ಪಸೂತ್ರ', 'ಬ್ರಹ್ಮಸೂತ್ರ'ಗಳಲ್ಲಿ ಕ್ರಮವಾಗಿ 'ಬೋಧಾಯನ', ಬಾದರಾಯಣ ಎಂಬುದಾಗಿಯೂ ; ಈಚೆಗೆ ಎಂದರೆ 10ನೇ ಶತಕದ ರಾಜಶೇಖರನ 'ಕಾವ್ಯ ಮೀಮಾಂಸಾ'ದಲ್ಲಿ 'ಯಾಯಾವರೀಯಃ' ಎಂದೂ ಗೋತ್ರನಾಮ ನಿರ್ದೇಶವಿದೆ.

ಕೌಟಿಲ್ಯನ ಜೀವನದ ಬಗ್ಗೆ ತಿಳಿದಿರುವುದೂ ಅತ್ಯಲ್ಪ. ಇವನ ತಂದೆ ತಾಯಿಯರ, ಆಚಾರ್ಯ-ಗುರುಗಳ ಅಥವಾ ಹುಟ್ಟೂರಿನ ವಿಷಯದಲ್ಲಿ ಏನೊಂದೂ ಗೊತ್ತಿಲ್ಲ. ಈತನ ಜೀವನದಲ್ಲಿ ಒಂದು ಅತಿಶಯ ಘಟನೆ ಈ ಗ್ರಂಥದ ರಚನೆ. ಇದರಲ್ಲಿ ಇನ್ನೊಂದು ಮಹೋನ್ನತ ಘಟನೆಗೆ ಸೂಚನೆ ಕಾಣಸಿಗುತ್ತದೆ.

"ಯೇನ ಶಸ್ತ್ರಂ ಚ ಶಾಸ್ತ್ರಂ ಚ ನಂದರಾಜಗತಾ ಚ ಭೂಃ ।
ಅಮರ್ಷೇಣೋದ್ಧೃತಾನ್ಯಾಶು ತೇನ ಶಾಸ್ತ್ರಮಿದಂ ಕೃತಂ ॥" (ಕಾ. 381)

ನಂದರಾಜರ ವಶವಾಗಿದ್ದ ಭೂಮಿಯನ್ನು ಕೋಪಾವಿಷ್ಟನಾದ ಕೌಟಿಲ್ಯ ಉದ್ಧರಿಸಿದನೆಂದೂ ಅದಕ್ಕಾಗಿಯೇ ಶಸ್ತ್ರವನ್ನೂ ಶಾಸ್ತ್ರವನ್ನೂ ಎತ್ತಿಹಿಡಿದನೆಂದೂ ತಿಳಿಯುತ್ತದೆ.

"ಕೌಟಿಲ್ಯೇನ ನರೇಂದ್ರಾರ್ಥೇ ಶಾಸನಸ್ಯ ವಿಧಿಃ ಕೃತಃ" (31-79)

ಎಂಬ ಹೇಳಿಕೆಯಿಂದ ನಂದರಾಜರನ್ನು ನಾಶಪಡಿಸಿ ಬೇರೊಬ್ಬನನ್ನು ಆ ರಾಜ್ಯದಲ್ಲಿ ಸ್ಥಾಪಿಸಿ, ಆತನಿಗಾಗಿ ಈ ಶಾಸ್ತ್ರಗ್ರಂಥ ರಚಿಸಿದನೆಂದು ತಿಳಿದು ಬರುತ್ತದೆ. ಸೋಮದೇವ ತನ್ನ ನೀತಿವಾಕ್ಯಾಮೃತದಲ್ಲಿ "ಶ್ರೂಯತೇ ಕಿಲ ಚಾಣಕ್ಯಃ ತೀಕ್ಷ್ಣ-ದೂತ ಪ್ರಯೋಗೇಣೈಕಂ ನಂದಂ ಜಘಾನೇತಿ"—ಎಂದೂ ಸಮರ್ಥಿಸುತ್ತಾನೆ. ನಂದರೆಂಬ ರಾಜರನ್ನು ನಾಶಪಡಿಸಿ ಚಂದ್ರಗುಪ್ತಮೌರ್ಯನನ್ನು ಚಕ್ರವರ್ತಿಯನ್ನಾಗಿ ಮಾಡಿದ ಕಥೆ ವಿಷ್ಣು-ಮತ್ಸ್ಯಪುರಾಣಗಳಲ್ಲಿ ಉಕ್ತವಾಗಿದೆ. 'ಮುದ್ರಾರಾಕ್ಷಸ' ನಾಟಕವೂ ಇವನ್ನೇ ಬಳಸಿಕೊಂಡಿದೆ.

**ಕಾಲ :** ಚಂದ್ರಗುಪ್ತ ಮೌರ್ಯ ಕ್ರಿ.ಪೂ. 321ರಲ್ಲಿ ದೊರೆಯಾದನಾದ್ದರಿಂದ ಕೌಟಿಲ್ಯನೂ ತನ್ನ ಕೃತಿಯನ್ನು ಸುಮಾರು ಅದೇ ಕಾಲದಲ್ಲಿ ರಚಿಸಿದನೆಂದು ಹೇಳಬಹುದು. ಚಂದ್ರಗುಪ್ತನ ಆಸ್ಥಾನದಲ್ಲಿ ಗ್ರೀಕ್ ರಾಯಭಾರಿಯಾಗಿದ್ದ ಮೆಗಾಸ್ತ-ನೀಸ್‌ನ 'ಇಂಡಿಕಾ'ದ ಉಪಲಬ್ಧ ಭಾಗಗಳಲ್ಲಿರುವ ವಿವರಗಳಿಗೂ 'ಅರ್ಥಶಾಸ್ತ್ರ'ದಲ್ಲಿನ ವಿವರಗಳಿಗೂ ಹೊಂದಾಣಿಕೆಯಿದೆ ಎಂದು ವಿನ್ಸೆಂಟ್ ಸ್ಮಿತ್ ತೋರಿಸಿಕೊಟ್ಟಿದ್ದಾರೆ.

ಕೌಟಿಲ್ಯ ಕೃತವೆಂದು ಭಾವಿಸಿದರೂ ಕೆಲವರು ಆತನನ್ನು ಚಂದ್ರಗುಪ್ತ ಮೌರ್ಯನ ಸಮಕಾಲೀನನೆಂದು ಒಪ್ಪುವುದಿಲ್ಲ. ಕ್ರಿಸ್ತಶಕದ ಕಾಲಕ್ಕೆ ಸೇರಿದ ಒಬ್ಬ ಲೇಖಕನೆಂದು ತೋರಿಸುವ ಯತ್ನ ಮಾಡಿದ್ದಾರೆ. 'ಯಾಜ್ಞವಲ್ಕ್ಯ ಸ್ಮೃತಿ'ಯ ಮತ್ತು ವಾತ್ಸ್ಯಾಯನನ 'ಕಾಮಸೂತ್ರ'ದ ಶೈಲಿಗೂ 'ಅರ್ಥಶಾಸ್ತ್ರ'ದ ಶೈಲಿಗೂ ಸಾಮ್ಯವಿದೆ. ಅದೇ ಆಧಾರವಿಟ್ಟುಕೊಂಡು ಅವೆರಡಕ್ಕಿಂತ ಈಚಿನದು 'ಅರ್ಥಶಾಸ್ತ್ರ' ಎನ್ನುತ್ತಾರೆ. ಆದರೆ ಈ ವಾದಗಳಲ್ಲಿ ಹುರುಳಿಲ್ಲ. ಅಲ್ಲದೆ ಅನೇಕ ಅಪಾಣಿನೀಯ ಪ್ರಯೋಗಗಳೂ 'ಅರ್ಥಶಾಸ್ತ್ರ'ದಲ್ಲಿವೆಯಾಗಿ, ಇದು ಕ್ರಿಸ್ತಪೂರ್ವಕ್ಕೆ ಸೇರಿದ್ದು ಎನ್ನಲು ಯಾವ ಅಡ್ಡಿಯೂ ಇಲ್ಲ.

**ಕೃತಿಗಳು :** ಕೌಟಿಲ್ಯನು 'ಅರ್ಥಶಾಸ್ತ್ರ'ವನ್ನಲ್ಲದೆ ಇತರ ಯಾವ ಕೃತಿಗಳನ್ನು ರಚಿಸಿದನೆಂದು ನಮಗೆ ಯಾವ ಸೂಚನೆಯೂ ಇಲ್ಲ. 'ವೃದ್ಧ ಚಾಣಕ್ಯ', 'ಚಾಣಕ್ಯ ನೀತಿಸೂತ್ರ' ಈ ಗ್ರಂಥಗಳನ್ನು ಇದೇ ಕೌಟಿಲ್ಯ–ಚಾಣಕ್ಯ ರಚಿಸಿದ ನೆನ್ನಲು ಸಾಧ್ಯವಿಲ್ಲ.

**ಅರ್ಥಶಾಸ್ತ್ರ :** ಅರ್ಥಶಾಸ್ತ್ರಕ್ಷೇತ್ರದಲ್ಲಿ ಕೌಟಿಲ್ಯನ 'ಅರ್ಥಶಾಸ್ತ್ರ'ವೇ ಮೊದಲ ಕೃತಿಯಲ್ಲ. ಇವಕ್ಕಿಂತ ಹಿಂದೆ ಧರ್ಮಸೂತ್ರಗಳಲ್ಲಿ ರಾಜರ ಕರ್ತವ್ಯಗಳನ್ನು ವಿವರಿಸುವಲ್ಲಿ ರಾಜನೀತಿ ವಿಷಯಗಳೂ ಬರುತ್ತವೆ. ಭೀಷ್ಮ ಯುಧಿಷ್ಠಿರನಿಗೆ ರಾಜಧರ್ಮಗಳನ್ನು ಉಪದೇಶಿಸಿದುದನ್ನು ಮಹಾಭಾರತದ ಶಾಂತಿಪರ್ವದಲ್ಲಿ ವಿಸ್ತಾರವಾಗಿ ಪ್ರಸ್ತಾವಿಸಲಾಗಿದೆ. ಅರ್ಥಶಾಸ್ತ್ರದಂತಹ ಒಂದು ಶಾಸ್ತ್ರ ಬೆಳೆಯು ತ್ತಿತ್ತೆಂದು ರಾಮಾಯಣದಿಂದಲೂ ತಿಳಿಯುತ್ತದೆ. ಅಲ್ಲದೆ ಕೌಟಿಲ್ಯನು ತನ್ನ ಹಿಂದಿನ ಆಚಾರ್ಯರ ಅಭಿಪ್ರಾಯಗಳನ್ನು ಅಲ್ಲಲ್ಲಿ ಉದಾಹರಿಸಿ ಹನ್ನೆರಡು ಆಚಾರ್ಯ ರನ್ನು ಹೆಸರಿಸುತ್ತಾನೆ : ಬೃಹಸ್ಪತಿ, ಶುಕ್ರ, ಮನು, ಅಂಭಿ–ಇವರುಗಳ ಶಿಷ್ಯರು, ಪರಾಶರ ಮತ್ತು ಅವನ ಶಿಷ್ಯರು, ಭಾರದ್ವಾಜ, ವಿಶಾಲಾಕ್ಷ, ಪಿಶುನ, ಕೌಣಪದಂತ, ವಾತವ್ಯಾಧಿ, ಬಾಹುದಂತೀ ಪುತ್ರ. ಕೆಲವೆಡೆ 'ಆಚಾರ್ಯಾಃ' ಎಂದಷ್ಟೇ ನಿರ್ದೇಶ ವಿದೆ ; ಅದು ಯಾರಿಗೆ ಅನ್ವಯವಾಗುತ್ತದೆ ಎಂದು ತಿಳಿಯದು.

ಈ ಗ್ರಂಥದ ವೈಶಿಷ್ಟ್ಯವನ್ನು ಚರ್ಚಿಸುವ ಮೊದಲು ಅದರ ವಿಷಯ ವೈವಿಧ್ಯವನ್ನು ಅರಿಯಬೇಕು. ಇದರಲ್ಲಿ 180 ಪ್ರಕರಣಗಳನ್ನು 150 ಅಧ್ಯಾಯ ಗಳಲ್ಲಿ ವಿಭಾಗಿಸಿದೆ. ಮತ್ತು ಇವು 15 ಅಧಿಕರಣಗಳಾಗಿ ಭಾಗವಾಗಿವೆ. ಒಟ್ಟು 6000 ಶ್ಲೋಕ ಪರಿಮಾಣವುಳ್ಳದ್ದು. ಮೊದಲ ಅಧ್ಯಾಯ ವಿಷಯಾನುಕ್ರಮಣಿಕೆ. ಮೊದಲ ಐದು ಅಧಿಕರಣಗಳನ್ನು (ಎಂದರೆ 1–5) 'ತಂತ್ರ' ಎನ್ನುತ್ತಾರೆ. ಇದು ಒಳಾಡಳಿತವನ್ನು ಕುರಿತಿದೆ. ಮುಂದಿನ ಎಂಟು ಅಧಿಕರಣಗಳಿಗೆ (ಎಂದರೆ 6–13) 'ಆವಾಪ' ಎಂದು ಹೆಸರು. ಇದರಲ್ಲಿ ಹೊರನಾಡಿನ ವ್ಯವಹಾರದ ವಿವರಣೆಯಿದೆ. ಕಡೆಯ ಎರಡು ಅಧಿಕರಣಗಳು 'ಶೇಷ' ಎನಿಸುತ್ತವೆ. ಗ್ರಂಥಪೂರ್ತಿ ಸೂತ್ರದಂಥ

ಗದ್ಯದಲ್ಲಿದೆ. ಮಧ್ಯೆ ಮಧ್ಯೆ ಪದ್ಯಗಳಿವೆ. ಪ್ರತಿ ಅಧ್ಯಾಯದ ಕೊನೆಯಲ್ಲಿ ಸಂಗ್ರಹಕಾರಿಕೆಗಳಿವೆ.

'ತಂತ್ರ' ಅಥವಾ ಒಳಾಡಳಿತ ವಿಭಾಗದಲ್ಲಿ ವಿನಯಾಧಿಕಾರ ಮೊದಲನೆಯದು. ಇದರಲ್ಲಿನ ವಿಷಯಗಳು: ರಾಜನಾಗಲು ಬೇಕಾದ ವಿದ್ಯಾಭ್ಯಾಸ ಮೊದಲಾದ ಸಿದ್ಧತೆಗಳ ಚರ್ಚೆ, ಕಲಿಯಬೇಕಾದ ಶಾಸ್ತ್ರಗಳು, ಅನುಸರಿಸಬೇಕಾದ ಶಿಸ್ತಿನ ಜೀವನ ಕ್ರಮ, ಅಮಾತ್ಯ, ಪುರೋಹಿತ ಮುಂತಾದ ಸಹಾಯಕರ ಆಯ್ಕೆ ಇತ್ಯಾದಿ (ನಿಯೋಜನೆ, ಪರೀಕ್ಷೆ, ನೇಮಕ), ಬೇಹುಗಾರಿಕೆ ವ್ಯವಸ್ಥೆ, ಮಂತ್ರಾಲೋಚನೆ—ಅದರ ಆವಶ್ಯಕತೆ ಮತ್ತು ಪ್ರಕಾರ, ಒಳ – ಹೊರ ಶತ್ರುಗಳಿಂದ ಅರಸನ ರಕ್ಷಣೆ.

ಎರಡನೇ ಅಧಿಕರಣ ಅಧ್ಯಕ್ಷ ಪ್ರಚಾರದಲ್ಲಿ—ರಾಜ್ಯದ ಅಪೇಕ್ಷಣಕ್ಕೆ ಒಳಪಡುವ ಎಲ್ಲವನ್ನು ಇಪ್ಪತ್ತೆಂಟು ಶಾಖೆಗಳಾಗಿ – ಅಧಿಕರಣಗಳಾಗಿ – ವಿಂಗಡಿಸಿ, ಒಂದೊಂದರ ಉಸ್ತುವಾರಿಗೂ ಒಬ್ಬೊಬ್ಬ ಅಧ್ಯಕ್ಷನ ನೇಮಕ. ಆತನ ಕರ್ತವ್ಯಗಳು. ಅಶ್ವ, ಆಕರ (ಎಂದರೆ ಗಣಿ). ಕುಪ್ಯ (ಎಂದರೆ ಅರಣ್ಯಸಂಪತ್ತು), ಖನಿ (ಎಂದರೆ ಸಾಗರೋತ್ಪನ್ನ)—ಇವು ಆ ಅಧಿಕರಣಗಳಲ್ಲಿ ಕೆಲವು.

ಮೂರನೆಯ ಧರ್ಮಸ್ಥೀಯವು ನ್ಯಾಯಾಲಯಗಳ ವಿಧಿವಿಧಾನಗಳನ್ನು ಕುರಿತಿವೆ. ಅದಕ್ಕೆ ಬೇಕಾದ ನಿಬಂಧನೆಗಳು, ದಂಡಸಂಹಿತೆ ಇಲ್ಲಿವೆ.

ನಾಲ್ಕನೆಯ ಕಂಟಕಶೋಧನ ನಾನಾವೃತ್ತಿಗಳಲ್ಲಿ ತೊಡಗಿರುವವರನ್ನು ಪೀಡಿಸುವ ವ್ಯಕ್ತಿಗಳಿಗಾಗಿ ಶೋಧನೆ ಮತ್ತು ಅವರಿಗೆ ದಂಡ ಇದನ್ನು ತಿಳಿಸುತ್ತದೆ.

ಐದನೆಯದು ಯೋಗವೃತ್ತ–ಸರ್ಕಾರಿ ಸೇವಾ ನಿಯಮಾವಳಿ ಎನ್ನಬಹುದು. ರಾಜ್ಯವ್ಯವಹಾರದಲ್ಲಿ ನಿಯುಕ್ತರಾದ ಸೇವಕರ ನಡೆವಳಿಕೆ, ಅವರ ತಪ್ಪನ್ನು ತಿಳಿಯುವ ಬಗೆ, ತಪ್ಪಿಗೆ ಶಿಕ್ಷೆ—ಇವು ನಿರೂಪಿತವಾಗಿವೆ.

ನೆರೆ ರಾಜ್ಯಗಳೊಡನೆ ವ್ಯವಹಾರದ ಪರಿಯನ್ನು ತಿಳಿಸುವ ಭಾಗ 'ಆವಾಪ'. ಇದರಲ್ಲಿ ಮೊದಲು ಮಂಡಲಯೋನಿ; ಇದರಲ್ಲಿ ಸ್ವಾಮಿ, ಅಮಾತ್ಯ, ಜನಪದ, ದುರ್ಗ, ಕೋಶ, ದಂಡ, ಮಿತ್ರರ ಪ್ರಕೃತಿಗಳು. ರಾಜ್ಯದ ಸುತ್ತ ಇರುವ ಮಿತ್ರ ಮೊದಲಾದ ಹನ್ನೆರಡು ಬಗೆಯ ರಾಜ್ಯಗಳು (ರಾಜಮಂಡಲ) – ಇವುಗಳ ಲಕ್ಷಣ. ಇಂಥ ಅರಸರೊಡನೆ ಇರುವ ಸಂಧಿ, ವಿಗ್ರಹ, ಯಾನ, ಆಸನ, ಸಂಶ್ರಯ, ದ್ವೈಧೀಭಾವ—ಈ ಆರು ಗುಣಗಳ ಪ್ರಸ್ತಾವ ಮುಂದಿನ ಷಾಡ್ಗುಣ್ಯ ಎಂಬ ಅಧಿಕರಣದಲ್ಲಿವೆ. ಹಿಂದೆ ಹೇಳಿದ ಪ್ರಕೃತಿಗಳು ಬಲಿಯಾಗಬಹುದಾದ ವ್ಯಸನಗಳು, ಕ್ಲೇಶಗಳು, ಅವುಗಳ ಪರಿಹಾರ ಎಂಟನೇ ವ್ಯಸನಾಧಿಕಾರದಲ್ಲಿ ಪ್ರಸ್ತುತವಾಗಿವೆ. 'ಅಭಿಯಾಸ್ಯತ್ ಕರ್ಮ' ಎಂಬ ಹೆಸರೇ ತಿಳಿಸುವಂತೆ ಈ ಅಧಿಕರಣದಲ್ಲಿ ದಾಳಿ ಮಾಡಹೊರಟವನು ಗಮನಿಸಬೇಕಾದ ಸ್ವಪರಸಾಮರ್ಥ್ಯ, ಕಾಲ, ದೇಶ, ಲಾಭ,

ನಷ್ಟ ಇತ್ಯಾದಿಗಳನ್ನು ತಿಳಿಸುತ್ತದೆ. ಯುದ್ಧದ ಪರಿಯನ್ನು ಸಾಂಗ್ರಾಮಿಕ ಅಧಿಕರಣ ಬಣ್ಣಿಸುತ್ತದೆ. ಮುಂದಿನ ಸಂಘವೃತ್ತ ಎಂಬ ಕಿರಿದಾದ ಅಧಿಕರಣದಲ್ಲಿ ವರ್ತಕರ ಸಂಘಗಳ ಮೂಲಕ ಪರರಾಜ್ಯ ವ್ಯವಹಾರವನ್ನು ಸಾಧಿಸುವ ಉಪಾಯವನ್ನು ಚಿಂತಿಸುತ್ತಾನೆ. ಆಬಲೀಯಸಂ ಎಂಬುದು ದುರ್ಬಲನನ್ನೇ ಕುರಿತಿದೆ; ಬಲಿಷ್ಠನೊಂದಿಗೆ ಅವನ ವರ್ತನೆಯನ್ನು ಸಮೀಕ್ಷಿಸುತ್ತದೆ. ಮುತ್ತಿಗೆ ಹಾಕಿದ ಕೋಟೆಯನ್ನು ವಶಪಡಿಸಿಕೊಳ್ಳುವುದು ಹೇಗೆಂದು 'ದುರ್ಗಲಂಭೋಪಾಯ' ಹೇಳಿಕೊಡುತ್ತದೆ.

14ನೇ ಔಪನಿಷದ ಎಂಬ ಅಧಿಕರಣದಲ್ಲಿ ಕೆಲವು ಔಷಧ ಮಂತ್ರ ಇತ್ಯಾದಿಗಳ ಪ್ರಯೋಗವನ್ನು ವಿವರಿಸಲಾಗಿದೆ. 15ನೆಯ ತಂತ್ರಯುಕ್ತಿಯಲ್ಲಿ ಶಾಸ್ತ್ರನಿರೂಪಣ ವಿಧಿಯನ್ನು ವಿಶದಗೊಳಿಸಲಾಗಿದೆ.

ಹೀಗೆ ಒಂದು ರಾಜ್ಯದ ಆಡಳಿತಕ್ಕೆ ಬೇಕಾದ ಎಲ್ಲವನ್ನೂ ಸಮಗ್ರವಾಗಿ ಚಿಕ್ಕದಾಗಿ ಮತ್ತು ಚೊಕ್ಕವಾಗಿ, ಅಚ್ಚುಕಟ್ಟಾಗಿ ಸಾಕಾಂಕ್ಷಾ ಕ್ರಮದಲ್ಲಿ ನಿರೂಪಿಸುತ್ತದೆ. ಈ ಗ್ರಂಥ ವೃಥಾ ವಿಸ್ತಾರವಿಲ್ಲದೆ ಸುಲಭ, ಸರಳ. ನಿಶ್ಚಿತವಾದ ಹಾಗೂ ಖಚಿತವಾದ ಅಭಿಪ್ರಾಯಗಳನ್ನು ತಿಳಿಸುವಂತಹುದು ಕೌಟಿಲ್ಯನ 'ಅರ್ಥಶಾಸ್ತ್ರ'.

"ಸುಖ-ಗ್ರಹಣ-ವಿಜ್ಞೇಯಂ ತತ್ತ್ವಾರ್ಥಪದ-ನಿಶ್ಚಿತಂ ।
ಕೌಟಿಲ್ಯೇನ ಕೃತಂ ಶಾಸ್ತ್ರಂ ವಿಮುಕ್ತ-ಗ್ರಂಥವಿಸ್ತರಂ ॥" (ಅಧ್ಯಾಯ ೧)

ತನ್ನ ಹಿಂದಿನ ಶಾಸ್ತ್ರಕಾರರು ಬರೆದ ಗ್ರಂಥಗಳನ್ನೆಲ್ಲ ಪರಿಶೀಲಿಸಿ ಈ ಒಂದು ಕೃತಿಯನ್ನು ರಚಿಸಲಾಗಿದೆ ಎಂದು ಹೇಳಿಕೊಂಡಿದ್ದಾನೆ—

"ಯಾವಂತಿ ಅರ್ಥಶಾಸ್ತ್ರಾಣಿ ಪೂರ್ವಾಚಾರ್ಯೈಃ ಪ್ರಸ್ಥಾಪಿತಾನಿ,
ಪ್ರಾಯಶಃ ತಾನಿ ಸಂಹೃತ್ಯ ಏಕಮಿದಂ ಅರ್ಥಶಾಸ್ತ್ರಂ ಕೃತಂ."

ಅಷ್ಟೇ ಅಲ್ಲ, ಪ್ರಯೋಗವನ್ನೂ ಆಚರಣೆಯನ್ನೂ ಗಮನಕ್ಕೆ ತಂದುಕೊಂಡಿದ್ದಾನೆ. ಅವನೇ ಹೇಳಿಕೊಳ್ಳುವಂತೆ—

"ಸರ್ವಶಾಸ್ತ್ರಾಣಿ ಅನುಕ್ರಮ್ಯ ಪ್ರಯೋಗ ಮುಪಲಭ್ಯ ಚ ।
ಕೌಟಲ್ಯೇನ ನರೇಂದ್ರಾರ್ಥೇ ಶಾಸನಸ್ಯ ವಿಧಿಃ ಕೃತಃ ॥" (31. 79)

ಈ ಕೃತಿ ತತ್ತ್ವಗಳ ಬರಡು ವಿವೇಚನೆಯಾಗದೆ ಪ್ರಾಯೋಗಿಕ ಪರೀಕ್ಷೆಯಿಂದ ಸಿದ್ಧವಾದುದರ ನಿರೂಪಣೆ.

"ಶಾಸ್ತ್ರವಿತ್ ಅದೃಷ್ಟಕರ್ಮಾ ಕರ್ಮಸು ವಿಷಾದಂ ಗಚ್ಛೇತ್" (ಪುಟ 24)

ಕೇವಲ ಶಾಸ್ತ್ರವನ್ನು ತಿಳಿದಿದ್ದರೆ ಸಾಲದು, ಶಾಸ್ತ್ರವಿಚಾರವನ್ನು ಆಚರಣೆಗೆ, ಅನುಭವಕ್ಕೆ ತಂದುಕೊಂಡಿರಬೇಕು, ತಂದುಕೊಳ್ಳಬೇಕು—ಇದು ಕೌಟಿಲ್ಯನ ಆದರ್ಶ. ಇದು ಚಂದ್ರಗುಪ್ತನಿಗಾಗಿ ಬರೆದದ್ದು ಸರಿ. ಆದರೆ ಒಂದು ನಿರ್ದಿಷ್ಟ ರಾಜ್ಯಕ್ಕೆ, ನಿರ್ದಿಷ್ಟ ರಾಜನಿಗೆ ಮಾತ್ರ ಅನ್ವಯವಾಗುವಂತೆ ರಚಿತವಾಗಿಲ್ಲ. ಅದು ಸಾರ್ವ-

ಕಾಲಿಕ, ಸಾರ್ವದೇಶಿಕವಾಗಿದೆ. ಪ್ರೊ॥ ವಿ. ಆರ್. ರಾಮಚಂದ್ರ ದೀಕ್ಷಿತರು ಹೇಳಿರುವುದನ್ನು ಇಲ್ಲಿ ನೆನೆಸಿಕೊಳ್ಳಬಹುದು—

"Though Arthasastra was for the time being intended for Chandragupta, it was a text-book on polity for all kings and for all places." (The Mouryan Polity, Madras, 1932, p. 334)

'ಅರ್ಥಶಾಸ್ತ್ರ'ದ ವೈಶಿಷ್ಟ್ಯ ಅದರ ಪ್ರಾಯೋಗಿಕ ಮೌಲ್ಯದೊಂದಿಗೆ ವಿಚಾರ ಪ್ರಚೋದಕತೆಯಲ್ಲಿಯೂ ಕಾಣುತ್ತದೆ. ಮೇಲ್ನೋಟಕ್ಕೆ ಕೌಟಿಲ್ಯ ಆದರ್ಶವಾದಿಯಂತೆ ಕಾಣಬಹುದು. ಕೊಂಚ ಪರಿಶೀಲಿಸಿದರೆ, ಪ್ರತಿಪಂಕ್ತಿಯಲ್ಲಿಯೂ ಪ್ರಯೋಗದ ಒರೆಗಲ್ಲಿಗೆ ತಿಕ್ಕಿರುವುದರ ಸೂಚನೆ ಕಂಡುಬರುತ್ತದೆ.

'ತಾನಿ ಸಂಹೃತ್ಯ' ಎಂದು ಹೇಳಿಕೊಂಡಿದ್ದಾನೆ—ಎಂದು ಈ ಗ್ರಂಥವನ್ನು ಹಿಂದಿನ ಕೃತಿಗಳ ಸಂಗ್ರಹ ಎಂದು ತಿಳಿಯಬಾರದು. ಕೌಟಿಲ್ಯ ಸ್ವತಂತ್ರ ವಿಚಾರಶೀಲ. ಹಿಂದಿನ ಆಚಾರ್ಯರ ಅಭಿಪ್ರಾಯಗಳ ದೋಷಗಳನ್ನು ಎತ್ತಿ ತೋರಿಸುತ್ತಾನೆ. ಉದಾಹರಣೆಗೆ: ಅಮಾತ್ಯರನ್ನು ಹೊಸದಾಗಿ ನೇಮಿಸುವಾಗ ಅವರನ್ನು ಒಂದು ಕೆಲಸದಲ್ಲಿ ನಿಯೋಜಿಸಿ, ಅವರನ್ನು ಪರೀಕ್ಷಿಸಬೇಕು ಎಂದು ಹೇಳಿ 'ಆಚಾರ್ಯ'ರು ಹೇಳಿದ ವಿಧಾನವನ್ನು ವರ್ಣಿಸುತ್ತಾನೆ. ಆದರೆ ಮನೋವಿಜ್ಞಾನದ ಆಧಾರದ ಮೇಲೆ ಈ ಪರೀಕ್ಷೆಗಳನ್ನು ನಡೆಸುವ ಪರಿಯಲ್ಲಿ ದೋಷವನ್ನು ಎತ್ತಿ ತೋರಿಸಿದ್ದಾನೆ ಕೌಟಿಲ್ಯ.

ರಾಜನ ಸಿದ್ಧತೆಯಲ್ಲಿ ಇಂದ್ರಿಯ ನಿಗ್ರಹ ಮೊತ್ತಮೊದಲ ಸ್ಥಾನವನ್ನು ಪಡೆದಿದೆ. 'ಇಡೀ ಈ ಶಾಸ್ತ್ರವೇ ಇಂದ್ರಿಯ ಜಯ ('ಕೃತ್ಸ್ನಂ ಹಿ ಶಾಸ್ತ್ರಮಿದಂ ಇಂದ್ರಿಯ ಜಯಃ' ಪ್ರ. 19)' ಎಂದು ಹೇಳುತ್ತಾನೆ. ಈ ಶಾಸ್ತ್ರವನ್ನು ಅಧ್ಯಯನ ಮಾಡಿ ಅರ್ಥ ಮಾಡಿಕೊಳ್ಳಲು ಇಂದ್ರಿಯ ನಿಗ್ರಹ ಅತ್ಯಾವಶ್ಯಕವಾದಂತೆ ಶಾಸ್ತ್ರಾರ್ಥವನ್ನು ಆಚರಣೆಗೆ ತರುವಲ್ಲಿಯೂ ಎಂದರೆ ರಾಜ್ಯಾಡಳಿತದಲ್ಲಿಯೂ ಇಂದ್ರಿಯ ನಿಗ್ರಹವಿರಬೇಕೆಂಬುದು ಕೌಟಿಲ್ಯನ ಅಭಿಪ್ರಾಯ. ಇದೊಂದಿದ್ದರೆ ಸಾಕೆನ್ನುವಷ್ಟು ಅದರ ಮಹತ್ತ್ವವಿದೆ. ಬೇಹುಗಾರಿಕೆಯೂ ಆಡಳಿತದಲ್ಲಿ ಅತಿ ಮಹತ್ತ್ವವನ್ನು ಪಡೆದಿವೆ. ಇದನ್ನು ಮನಗಂಡ ಕೌಟಿಲ್ಯ ವಿಸ್ತಾರವಾದ ಮತ್ತು ಜಟಿಲವಾದ ಗೂಢಚಾರ ವ್ಯವಸ್ಥೆಯನ್ನು ವಿಧಿಸಿದ್ದಾನೆ.

ಮಹಾಪೂರದಂಥ ರಾಷ್ಟ್ರೀಯ ಆಪತ್ತುಗಳನ್ನು ತಡೆಗಟ್ಟುವ ವಿಧಿ ವಿಧಾನಗಳು, ನೆರೆಹೊರೆಗೆ ಅಗ್ನಿಯಾಗದಂತೆ ಮನೆಗಳ ನಿರ್ಮಾಣ, ನೀರಾವರಿಗೆ ಇತ್ತಿರುವ ಆದ್ಯತೆ. ಕೃಷಿ ಉತ್ಪನ್ನಗಳ ಮೇಲೆ ಕರವೈವಿಧ್ಯ, ಅಭಯಾರಣ್ಯಗಳ ಏರ್ಪಾಡು, ಅರಣ್ಯಸಂಪತ್ತಿನ ಅಭಿವೃದ್ಧಿ ಮೊದಲಾದುವುಗಳನ್ನು ನಿರೂಪಿಸಿರುವುದು ಕೌಟಿಲ್ಯನ ದೂರದೃಷ್ಟಿ ಹಾಗು ಪ್ರಜಾಹಿತಚಿಂತನೆಗೆ ಸಾಕ್ಷಿಗಳಾಗಿವೆ.

ರಾಜ್ಯದ ಆಡಳಿತ ಪ್ರಜೆಗಳಿಗೆ ಪ್ರಿಯವಾದುದೂ ಸುಖ-ಹಿತಗಳನ್ನು ಕೊಡುವುದೂ ಆಗಿರಬೇಕೆಂದು ಕೌಟಿಲ್ಯ ಸೂಚಿಸುತ್ತಾನೆ. ಪ್ರಿಯ-ಹಿತ-ಸುಖಗಳಿಗೆ ಅಳತೆಗೋಲು ಪ್ರಜೆಗಳು. ತನಗೆ ಪ್ರಿಯವಾದುದು ರಾಜ್ಯಕ್ಕೆ ಪ್ರಿಯವಾದುದಾಗಿರುತ್ತದೆ ಎಂದು ರಾಜನು ಭಾವಿಸಬಾರದು. ಪ್ರಜೆಗಳಿಗೆ ಪ್ರಿಯವಾದುದೇ ತನಗೂ ಪ್ರಿಯವೆಂದು ತಿಳಿದು ಅದನ್ನು ಸಾಧಿಸಬೇಕು. ಕೌಟಿಲ್ಯನ ವ್ಯವಸ್ಥೆಯಲ್ಲಿ ರಾಜನಿಗೇ ಪರಮಾಧಿಕಾರವಿದೆಯಾದರೂ, ರಾಜ್ಯ ಪ್ರಜೆಗಳಿಗಾಗಿ ಮತ್ತು ಪ್ರಜೆಗಳದ್ದು ಎಂಬುದನ್ನು ಕೌಟಿಲ್ಯ ಮರೆತಿಲ್ಲವೆಂಬುದು ಮೇಲ್ಕಂಡ ದೃಷ್ಟಿಯಿಂದ ಸ್ಪಷ್ಟವಾಗುತ್ತದೆ.

'ಪ್ರಜಾಸುಖೇ ಸುಖಂ ರಾಜ್ಞಃ ಪ್ರಜಾನಾಂ ಚ ಹಿತೇ ಹಿತಂ ।
ನಾತ್ಮಪ್ರಿಯಂ ಹಿತಂ ರಾಜ್ಞಃ ಪ್ರಜಾನಾಂ ತು ಪ್ರಿಯಂ ಹಿತಂ ॥' (19.43)

ರಾಜನಾದವನು ಪ್ರಜೆಗಳೊಡನೆ ನೇರಸಂಪರ್ಕ ಹೊಂದಿರಬೇಕು. ಇಲ್ಲದಿದ್ದರೆ ಪ್ರಜೆಗಳು ರೊಚ್ಚಿಗೇಳುತ್ತಾರೆ.

ದುರ್ದರ್ಶೋ ಹಿ ರಾಜಾ ಕಾರ್ಯಾಕಾರ್ಯವಿಪರ್ಯಾಸಂ ಆಸನ್ನೈಃ ಕಾರ್ಯತೇ ।
ತೇನ ಪ್ರಕೃತಿಕೋಪಂ ಅರಿವಶಂ ವಾ ಗಚ್ಛೇತ್ । (ಪು. 58)

ಎಂದು ಹೇಳಿ ರಾಜನ ವರ್ತನೆ ಹೇಗಿರಬೇಕೆಂದು ಕೌಟಿಲ್ಯ ತೋರಿಸಿಕೊಡುತ್ತಾನೆ. ಅಷ್ಟೇ ಅಲ್ಲ, ರಾಜತ್ವವು ಪಿತಾಪುತ್ರ ಪರಂಪರೆಯಲ್ಲಿಯೇ ಬರುವುದಿಲ್ಲ ಎಂಬುದು ಕೌಟಿಲ್ಯನ ನಿಲುವು: ಏಕಮಾತ್ರ ರಾಜಕುಮಾರನಾದರೂ ಉತ್ತರಾಧಿಕಾರಿಯಾಗಬೇಕಾದರೆ, ಅವನು ವಿದ್ಯಾ ವಿನಯ ಸಂಪನ್ನನಾಗಿರಬೇಕು ಎಂದು ಖಡಾಖಂಡಿತವಾಗಿ ಹೇಳುತ್ತಾನೆ—

''ನ ಚೈಕಪುತ್ರಂ ಅವಿನೀತಂ ರಾಜ್ಯೇ ಸ್ಥಾಪಯೇತ್'' (ಪು. 53)

ಇಂಥ ಆಧುನಿಕ ವಿಚಾರಗಳೂ 'ಅರ್ಥಶಾಸ್ತ್ರ'ದಲ್ಲಿ ಹೊಕ್ಕಿರುವುದು ಒಂದು ಅಚ್ಚರಿ.

ಮತ್ತೊಂದು ವೈಶಿಷ್ಟ್ಯ ಗಮನಾರ್ಹ: ಧರ್ಮದ ಚೌಕಟ್ಟಿನಲ್ಲಿ ತನ್ನ ಶಾಸ್ತ್ರವನ್ನು ನಿರೂಪಿಸಿದರೂ ಅದರಲ್ಲಿ ಮತೀಯ ಸಂಪರ್ಕವಿಲ್ಲ. ಧರ್ಮವೆಂದರೆ, ಸಮಾಜವೊಂದರ ಅಭಿವೃದ್ಧಿಗೆ ಆಂತರಿಕ ಸಂಬಂಧ ಹೊಂದಿದ ಸಾರ್ವಜನಿಕ ನಡವಳಿಕೆ ಎಂಬ ವಿಸ್ತಾರವಾದ ಕಲ್ಪನೆಯನ್ನು ಹೊಂದಿದೆ. ವಿವೇಚನಾ ಬುದ್ಧಿಯನ್ನು ಬೆಳೆಸುವ ಆನ್ವೀಕ್ಷಿಕೀಯ (ತರ್ಕದ) ಅಡಿಗಲ್ಲಿನ ಮೇಲೆ ಮುಂದುವರಿದು ಅನುಪಮ ರಾಜನೀತಿಭವನವನ್ನು ನಿಲ್ಲಿಸಿದ್ದಾನೆ. ರಾಜರಕ್ಷಣ—ಔಪನಿಷದಿಕ ಪ್ರಕರಣಗಳಲ್ಲಿ ಕೆಲವು ಪಾರಂಪರಿಕ ನಂಬಿಕೆಗಳು ಕಂಡುಬರುತ್ತವೆಯಾದರೂ, ಕೌಟಿಲ್ಯನ ಸ್ಥಿತಿಗೆ ಯಾವ ಧಕ್ಕೆಯೂ ಇಲ್ಲ. ಪ್ರಾಚೀನ ಭಾರತದಲ್ಲಿ ವಿಜ್ಞಾನದ ಅನೇಕ ತತ್ತ್ವಗಳು ಪಾರಂಪರಿಕ ಆಚರಣೆಯ ರೂಪದಲ್ಲಿಯೇ ಪ್ರಚಾರದಲ್ಲಿದ್ದುವು ಎಂಬುದನ್ನು ಮರೆಯಬಾರದು.

ಗ್ರೀಸ್‌ನಲ್ಲಿ ಹೆಚ್ಚು ಕಡಿಮೆ ಇದೇ ಕಾಲದ ಅರಿಸ್ಟಾಟಲ್‌ನನ್ನು ಮೀರಿಸಿದ್ದಾನೆಂದು ಒಪ್ಪದಿದ್ದರೂ ಸರಿಸಮನೆಂದು ಹೇಳಲು ಯಾವ ವಿರೋಧವೂ ಇಲ್ಲ. ಕೌಟಿಲ್ಯ–ಅರಿಸ್ಟಾಟಲ್ ಪರಸ್ಪರ ಪೂರಕರಾಗಿದ್ದಾರೆ. ಹೆಚ್ಚಿನ ವಿವರಣೆಗೆ **ಸಾಲೆಟೊರ್** ಅವರ ಕೃತಿ *Ancient Indian Political Thought and Institutions* (New York, 1963) ನೋಡಬಹುದು.

15 – 16ನೇ ಶತಕದ ಇಟಲಿ ರಾಜನೀತಿಜ್ಞ ಮೆಕೆವಿಲ್ಲಿಯನ್ನು ಡಿಪ್ಲಾಮಸಿಯ (ಅಂತರರಾಷ್ಟ್ರೀಯ ವ್ಯವಹಾರದ) ಜನಕ ಎಂದು ಭಾವಿಸಲಾಗಿದೆ. ವಸ್ತುತಃ ಆ ಗೌರವ ಕೌಟಿಲ್ಯನಿಗೆ ಸಲ್ಲಬೇಕು. ರಷ್ಯದ ಅಕಾದೆಮಿ ಆಫ್ ಸೈನ್ಸಸ್‌ನ ಅಂತರರಾಷ್ಟ್ರೀಯ ಸಂಬಂಧ ವಿಭಾಗದಲ್ಲಿ ಸಮಾಜ ಶಾಸ್ತ್ರ ಪ್ರಾಧ್ಯಾಪಕರಾದ ಡಾ॥ ಗ್ರಿಗೊರಿ ಬೊಂಡಾರೆವ್‌ಸ್ಕಿ ಅವರು ಈಚೆಗೆ ಇದನ್ನು ಸ್ಪಷ್ಟಪಡಿಸಿದ್ದಾರೆ.

ಸುಭದ್ರ ಹಾಗು ಪ್ರಜಾಹಿತ ಆಡಳಿತವನ್ನು ತರಲು ಛಲ ಹೊಂದಿದ್ದ ಕೌಟಿಲ್ಯ ಅದನ್ನು ಸಾಧಿಸಿದನಲ್ಲದೆ, ಅದರ ವಿಸ್ತಾರವಾದ ಹಾಗು ಸಂಕೀರ್ಣವಾದ ವ್ಯವಸ್ಥೆಯ ಸ್ವರೂಪವನ್ನು ಬಣ್ಣಿಸಿದ್ದಾನೆ. ಆಡಳಿತ ಸೂತ್ರವೆಲ್ಲ ಒಬ್ಬ ರಾಜನಲ್ಲಿ ನೆಲಸಿದ್ದರೂ ಪ್ರಜೆಗಳ ಕುಲಕ್ರಮಾಗತ ಪದ್ಧತಿಗಳು, ಪ್ರಾದೇಶಿಕ ಸಂಸ್ಕೃತಿಗಳು ಮೊದಲಾದುವನ್ನು ಗಮನಿಸಿ, ಅವುಗಳಿಗೆ ಧಕ್ಕೆಬಾರದಂತೆ ಆಡಳಿತವನ್ನು ನಡೆಸಿಕೊಳ್ಳಬೇಕೆಂದು ತಿಳಿಸಿ ತನ್ನ ಹಿರಿಮೆಯನ್ನು ಮೆರೆಸಿದ್ದಾನೆ.

ಇಂಥ ರಾಜಪದ್ಧತಿಯನ್ನು ಮೌರ್ಯ ದೊರೆಗಳು ಮಾತ್ರ ಪಾಲಿಸಿದರು ಎನ್ನಲಾಗದು. ಅದು ಮುಂದಿನ ಎಲ್ಲ ರಾಜಮಹಾರಾಜರ ಆಡಳಿತವ್ಯವಸ್ಥೆಗೂ ಆಧಾರವಾಗಿ ರಾರಾಜಿಸಿತು.

**ವ್ಯಾಖ್ಯಾನಗಳು :** ಹೀಗಿದ್ದರೂ ಈ ಕೃತಿಯ ಮೇಲೆ ಯಾವ ಸಂಸ್ಕೃತ ವ್ಯಾಖ್ಯೆಯೂ ಸಮಗ್ರವಾಗಿ ಉಪಲಬ್ಧವಿಲ್ಲ. ಈಗ ದೊರೆತಿರುವ ನಾಲ್ಕು ವ್ಯಾಖ್ಯಾನಗಳೂ ಅಸಮಗ್ರ. ಅಂತೆಯೇ 'ಅರ್ಥಶಾಸ್ತ್ರ'ದ ಹಸ್ತಪ್ರತಿಗಳೂ ವಿರಳ. ಆ ಕಾರಣದಿಂದಲೇ ಅಂಥ ಕೃತಿಯೊಂದು ಇದ್ದಿರಬೇಕು ಎಂದು ವಿದ್ವಾಂಸರಿಗೆ ಬಹು ಹಿಂದೆಯೇ ತಿಳಿದಿದ್ದರೂ, 1908ರ ವರೆಗೆ ಅದು ಪ್ರಕಾಶಗೊಳ್ಳಲಾಗಲಿಲ್ಲ. ಅದನ್ನು ಮೊದಲ ಬಾರಿಗೆ ಪರಿಷ್ಕರಿಸಿದ ಖ್ಯಾತಿ ಡಾ॥ ಆರ್. ಶಾಮಶಾಸ್ತ್ರಿಗಳದ್ದು. ಇದರಿಂದ ಪ್ರಪಂಚದಲ್ಲೆಲ್ಲ ಮೈಸೂರಿನ ಹೆಸರೂ ವ್ಯಾಪಿಸಿತು. ○

---

1. ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯದಿಂದ 1986ರಲ್ಲಿ ಪ್ರಕಟವಾದ 'ಕೌಟಿಲೀಯ ಅರ್ಥಶಾಸ್ತ್ರ'ದ ಐದನೆಯ ಪರಿಷ್ಕರಣವನ್ನು ಇಲ್ಲಿ ಉಪಯೋಗಿಸಲಾಗಿದೆ.

2. ಮೈಸೂರು ಆಕಾಶವಾಣಿಯು 'ಅರ್ಥಶಾಸ್ತ್ರದ ಅವಲೋಕನ' ಮಾಲಿಕೆಯಲ್ಲಿ 17–10–87ರಂದು ರಾತ್ರಿ 9-16ಕ್ಕೆ ಬಿತ್ತರಗೊಂಡ ಮೊದಲ ಭಾಷಣದ ಆಧಾರ ಹೊಂದಿದೆ.



# ಶಾಸನಗಳಲ್ಲಿ ಎಲಹಂಕ ನಾಡು*

—ಪಿ. ವಿ. ಕೃಷ್ಣಮೂರ್ತಿ

ಇಂದು ಚಿಕ್ಕ ಚಿಕ್ಕ ಕುಗ್ರಾಮಗಳೆನಿಸಿರುವ ಎಷ್ಟೋ ಊರುಗಳು ಹಿಂದೆ ವಾಣಿಜ್ಯ ಕೇಂದ್ರಗಳಾಗಿ, ರಾಜಧಾನಿಗಳಾಗಿ, ಕಲೆಯ ತವರಾಗಿ, ವಿದ್ಯಾಕೇಂದ್ರಗಳಾಗಿ ವಿಜೃಂಭಿಸಿರುವುದು ಕಂಡುಬರುತ್ತದೆ. ಆಯಾ ಊರಿನಲ್ಲಿರುವ ದೇವಾಲಯಗಳು, ಅವುಗಳ ಅವಶೇಷಗಳು, ಅಲ್ಲಿ ಅಳಿದುಳಿದಿರುವ ಕಟ್ಟಡಗಳು, ಕೋಟೆಯ ಭಾಗಗಳು, ಶಾಸನಗಳು ಉತ್ಖನನದಿಂದ ಹೊರತೆಗೆದ ವಸ್ತುಗಳು, —ಈ ವಿಷಯಗಳನ್ನು ತಿಳಿಸಿಕೊಡುವಲ್ಲಿ ಬಹಳ ಸಹಾಯಕವಾಗುತ್ತವೆ.

ಬೆಂಗಳೂರು ಜಿಲ್ಲೆಯ ಶಾಸನ ಸಂಪುಟವನ್ನು ಅವಲೋಕಿಸಿದಾಗ ಎಲಹಂಕ ನಾಡಿನ ಉಲ್ಲೇಖಗಳು ಪದೇ ಪದೇ ಗೋಚರವಾಗತೊಡಗಿ ಗಮನ ಸೆಳೆಯುತ್ತವೆ. ಮಧ್ಯಕಾಲೀನ ಬೆಂಗಳೂರು ಜಿಲ್ಲೆಯ ಇತಿಹಾಸದಲ್ಲಿ ಈ ನಾಡು ಪ್ರಖ್ಯಾತವಾಗಿದ್ದುದೇ ಇದಕ್ಕೆ ಕಾರಣವೆನ್ನಬಹುದು.

ಎಲಹಂಕ ನಾಡಿನಲ್ಲಿ ಇಂದಿನ ಬೆಂಗಳೂರಿನ ಬಹುಭಾಗವು ಸೇರಿದಂತೆ, ಬೆಂಗಳೂರು ಉತ್ತರ ತಾಲೂಕು, ಹೊಸಕೋಟೆ, ದೇವನಹಳ್ಳಿ, ದೊಡ್ಡಬಳ್ಳಾಪುರ, ನೆಲಮಂಗಲ ತಾಲೂಕುಗಳಲ್ಲಿನ ಅನೇಕ ಗ್ರಾಮಗಳು ಸಮಾವೇಶಗೊಂಡಿದ್ದವು ಎಂಬ ಅಂಶವನ್ನು ಶಾಸನಗಳು ದೃಢಪಡಿಸುತ್ತವೆ.

ಪ್ರಾಚೀನ ಕಾಲದ ಕಿರಿಕನಾಡನ್ನು ಕೇಂದ್ರವಾಗಿಟ್ಟುಕೊಂಡು ಕುಕ್ಕಜಿಪಾಟಿ-ಕ್ಕಾರಿನಾಡು, ಕುಕ್ಕಸೂರು ನಾಡು, ತೊಜಿವಳಿನಾಡುಗಳು ಹಾಗೂ ಮಾಶಂಡಿ ಮತ್ತು ಬೆಂಪೂರು ನಾಡುಗಳ ಹಲವು ಪ್ರದೇಶಗಳನ್ನೊಳಗೊಂಡಂತೆ "ಎಲಹಂಕ ನಾಡು" ಚೋಳರ ಆಳಿಕೆಯ ಕಾಲದಲ್ಲಿ ರೂಪತಾಳಿತೆನ್ನಬಹುದು.

ಈ ನಾಡಿನ ಮುಖ್ಯ ಸ್ಥಳ ಬೆಂಗಳೂರು ಉತ್ತರ ತಾಲೂಕಿನಲ್ಲಿರುವ 'ಯಲಹಂಕ' ಎಂಬ ಊರೇ ಆಗಿದ್ದು, ಬೆಂಗಳೂರಿನಿಂದ ಸುಮಾರು ಹದಿನಾರು ಕಿ.ಮೀ. ದೂರದಲ್ಲಿದೆ. ಶಾಸನಗಳಲ್ಲಿ ಈ ಊರ ಹೆಸರನ್ನು ಎಲಹಕ,[1] ಎಲವಕ,[2] ಎಲಹಕ್ಕ,[3] ಯಲಹಕ್ಕ,[4] ಯೆಲಹಕ,[5] ಯೆಲಹಕ್ಕ,[6] ಎಲಹ್ಕ,[7] ಎಲಹಂಕ,[8] ಯಲಹಂಕ,[9] ಯಲವಂಕ,[10] ಎಂದು ಕನ್ನಡದಲ್ಲೂ, 'ಇಲೈಪಾಕ್ಕ'[11] ಎಂದು ತಮಿಳಿನಲ್ಲೂ ಕರೆದಿರುವುದು ಕಂಡುಬರುತ್ತದೆ.

---

* ಬಿ.ಎಂ.ಶ್ರೀ. ಪ್ರತಿಷ್ಠಾನದ ಆಶ್ರಯದಲ್ಲಿ ದಿನಾಂಕ 24-11-87ರಂದು ನಡೆದ ಸಹೃದಯ ಗೋಷ್ಠಿಯಲ್ಲಿ ಮಂಡಿಸಿದ ಸಂಪ್ರಬಂಧ. ಈ ಸಂದರ್ಭದಲ್ಲಿ ಸಹೃದಯರಾಗಿ ಆಗಮಿಸಿ ಅನೇಕ ಸೂಚನೆ ಸಲಹೆಗಳನ್ನು ನೀಡಿ ಪ್ರೋತ್ಸಾಹಿಸಿದ ಹಿರಿಯರಿಗೂ, ಮಿತ್ರರಿಗೂ, ಲೇಖಕ ಋಣಿ.

ಎಲಹಂಕ ಎಂಬ ಊರಿನ ಹೆಸರಿನ ಬಗ್ಗೆಯಾಗಲೀ, ಅದರ ಪ್ರಾಚೀನತೆಯ ಬಗ್ಗೆಯಾಗಲೀ ಹೆಚ್ಚಿನ ಐತಿಹ್ಯಗಳಾಗಲೀ, ಸ್ಥಳಪುರಾಣಗಳಾಗಲೀ ಇದ್ದಂತೆ ಕಂಡು ಬರುತ್ತಿಲ್ಲ. ಶಾಸನಗಳಲ್ಲಿ ಎಲಹಕ್ಕ, ಎಲವಕ, ಮುಂತಾದ ಪ್ರಯೋಗಗಳಿರುವುದರಿಂದ ಎಲವ+ಹಕ್ಕೆ ಅಥವಾ ಎಲಪ+ಹಕ್ಕ ಎಂಬ ಪದಗಳು ಕೂಡಿ ಎಲವಪಕ್ಕೆ ಅಥವಾ ಎಲವಪಕ್ಕ ಎಂದಾಗಿ ಮುಂದೆ ಎಲಪ್ಪಕ್ಕ>ಎಲಪ್ವಕ್ಕ> ಎಲಪ್ವಂಕ/ಎಲಹಂಕ>ಯಲಹಂಕ ಎಂದು ರೂಪಾಂತರಗೊಂಡಿರಬೇಕು.

ಎಲವ ಎಂದರೆ ಬೂರುಗದ ಮರ (ಶಾಲ್ಮಲೀ ವೃಕ್ಷ). ಹಕ್ಕೆ ಎಂದರೆ ವಿಶ್ರಾಂತಿ ಸ್ಥಾನ, ಹಟ್ಟಿ, ಆಶ್ರಯ.

ಹಕ್ಕ ಎಂಬ ಪದವು ಪಕ್ಕ ಎಂಬ ಅರ್ಥದಲ್ಲಿ ಕೂಡ ಪ್ರಯೋಗಗೊಂಡಿರುವ ಸಾಧ್ಯತೆಗಳನ್ನು ತೆಗೆದುಹಾಕುವಂತಿಲ್ಲ. ಏಕೆಂದರೆ 'ಪಕ್ಕ ಪಕ್ಕ' ಎಂಬ ಜೋಡು ಪದವು ಹಕ್ಕ ಪಕ್ಕ ಆಗಿರಲು ಸಾಧ್ಯ. ಇದೇ ಈಗ ರೂಢಿಯಲ್ಲಿರುವ ಅಕ್ಕಪಕ್ಕವೂ ಆಗಿರುವ ಸಾಧ್ಯತೆಯಿದೆ. ಇಲ್ಲಿ ನಮಗೆ ಪ್ರಸ್ತುತವಾದದ್ದು 'ಹಕ್ಕ'ವಾಗಿದ್ದು, ಎಲವ+ಹಕ್ಕ ಸೇರಿ ಎಲವ್ಪಕ್ಕ>ಎಲಹಕ/ಎಲವಕ>ಎಲಹಂಕ/ಎಲವಂಕ ಎಂಬ ರೂಪಗಳಿಗೆ ಕಾರಣವಾಗಿರಬೇಕು.*

ಒಟ್ಟಾರೆ ಬೂರುಗದ ಮರದ ಸಾಮೀಪ್ಯದ ಹಿನ್ನೆಲೆಯಲ್ಲಿ ಈ ಊರಿನಹೆಸರು ಹುಟ್ಟಿರಬೇಕೆಂದು ಹೇಳಬಹುದಾಗಿದೆ.

ಕರ್ನಾಟಕದ ಸ್ಥಳನಾಮಗಳಲ್ಲಿ 'ಎಲವ'ದಿಂದ ಪ್ರಾರಂಭವಾಗುವ ಇತರ ಅನೇಕ ಊರುಗಳ ಉಲ್ಲೇಖಗಳು ಕಂಡುಬರುತ್ತವೆ.[12]

ಈ ಊರಿನ ಪ್ರಾಚೀನ ಉಲ್ಲೇಖವು ಕ್ರಿ.ಶ. 1046ರ ದೇವನಹಳ್ಳಿ ತಾಲೂಕಿನ ಗಂಗವಾರ ಗ್ರಾಮದ ಶಾಸನದಲ್ಲಿ ಬಂದಿದೆ.[13] ಚೋಳ ದೊರೆ ರಾಜರಾಜ ಕೇಸರಿ ವರ್ಮನಾದ ರಾಜರಾಜ ದೇವನ ಶಾಸನ ಇದಾಗಿದ್ದು ಕಿಡಾರಂಗೊಂಡ ಅಂದರೆ ಲಂಕೆಯನ್ನು ಗೆದ್ದ ಶೋಟಮೇಳಾನ್ ಎಂಬವನು "ಇಲೈಪಾಕ್ಕ"ದಲ್ಲಿದ್ದ ವಿವರವನ್ನು ತಿಳಿಸುತ್ತದೆ. ಇದರಿಂದಾಗಿ ಎಲಹಂಕವು ಇನ್ನೂ ಒಂದು ಶತಮಾನದಷ್ಟು ಹಿಂದೆ ಅಂದರೆ ಸುಮಾರು ಕ್ರಿ.ಶ.ಹತ್ತನೆಯ ಶತಮಾನದಲ್ಲಿ, ಗಂಗರ ಆಳಿಕೆಯ ಕಾಲದಲ್ಲೇ ಅಸ್ತಿತ್ವದಲ್ಲಿದ್ದಿರಬೇಕು ಎಂದೆನಿಸುತ್ತದೆ. ಆದರೆ ಆಗ ಇದು ನಾಡಿನ ರೂಪವನ್ನು ಪಡೆದಿರಲಿಲ್ಲವೆನ್ನಬಹುದು.

---

* ಪಂಕ ಶಬ್ದವು ಪಕ್ಕ, ಭಾಗ, ಎಂಬ ಅರ್ಥಗಳಲ್ಲಿ ಪಂಪಭಾರತ, ಸಿದ್ಧರಾಮ ಪುರಾಣ, ಸಾನಂದ ಚರಿತ್ರೆ, ಕುಮಾರವ್ಯಾಸ ಭಾರತದ ದ್ರೋಣ ಪರ್ವ ಮುಂತಾದ ಕನ್ನಡ ಕಾವ್ಯಗಳಲ್ಲಿ ಪ್ರಯೋಗಗೊಂಡಿರುವುದು ಇಲ್ಲಿ ಗಮನಾರ್ಹ ಅಂಶವಾಗಿದೆ. (ನೋಡಿ: ಕ.ಸಾ.ಪ. ಕನ್ನಡ ನಿಘಂಟು; ಸಂಪುಟ–೧, ಪುಟ ೧೦೫೪.)

ಕ್ರಿ. ಶ. ಸುಮಾರು 1200 ರ (ಹೊಯ್ಸಳರ ಕಾಲದ ?) ಶಾಸನದಲ್ಲಿ 'ಇಳ್ಳೈಪಾಕ್ಕನಾಟ್ಟು' ಎಂಬ ನಾಡಿನ ಉಲ್ಲೇಖವು ಮೊದಲ ಬಾರಿಗೆ ದೊರಕುತ್ತದೆ[14] ಇದು ರಾಜರಾಜ ಚೋಳ ವಳನಾಡಿನ ಭಾಗವಾಗಿದ್ದಿತು. ದೇಶಿಯ ಮಾಣಿಕ್ಯಪಟ್ಟಣವೆಂದು ಹೆಸರಾಗಿದ್ದ ದೊಂಬಲೂರು ಈ ನಾಡಿಗೆ ಸೇರಿದ ಸ್ಥಳವಾಗಿದ್ದ ಅಂಶವು ಅದೇ ಶಾಸನದಿಂದ ತಿಳಿದು ಬರುತ್ತದೆ. ಹೀಗೆ ಇದು ನಾಡಿನ ರೂಪ ಪಡೆದು ಮುಂದೆ ಹದಿನೆಂಟನೆಯ ಶತಮಾನದ ಆದಿಭಾಗದ ವರೆಗೂ ಮುಂದುವರಿದದ್ದು ಶಾಸನಗಳಿಂದ ಮನಗಾಣಬಹುದಾಗಿದೆ. ಎಲಹಂಕ ಒಂದು ನಾಡಾಗಿ ಸ್ಪಷ್ಟರೂಪವನ್ನು ಚೋಳರ ಕಾಲದಲ್ಲೇ ಪಡೆಯಿತೆಂಬ ಅಂಶವು ಚೋಳರ ಯಾವುದೇ ಶಾಸನದಿಂದಲೂ ದೃಢಪಡದಿದ್ದರೂ, ಅವರ ಅನಂತರ ಈ ಪ್ರದೇಶವನ್ನು ಆಳಿದ ಹೊಯ್ಸಳರ ಕಾಲದ ಶಾಸನಗಳಲ್ಲಿ ಪದೇ ಪದೇ ಈ ನಾಡಿನ ಉಲ್ಲೇಖಗಳು ಕಾಣಿಸಿಕೊಳ್ಳುತ್ತಿದ್ದುದಷ್ಟೇ ಅಲ್ಲ, ಈ ನಾಡು ಚೋಳರ ಕಾಲದಲ್ಲೇ ರೂಪಗೊಂಡಿರಬೇಕೆಂಬುದನ್ನು ಸಾರಿ ಸಾರಿ ಹೇಳುವಂತೆ ಭಾಸವಾಗುತ್ತದೆ. ಇದಕ್ಕೆ ಕಾರಣ ಚೋಳರು ರೂಪಿಸಿದ ಆಡಳಿತ ವಿಭಾಗಗಳನ್ನು ಹೊಯ್ಸಳರು ಹೆಚ್ಚಿನ ಬದಲಾವಣೆಗಳಿಲ್ಲದೆ ಬಳಕೆಯಲ್ಲಿಟ್ಟುಕೊಂಡಿದ್ದುದೇ ಆಗಿದೆ. ಈ ನಾಡನ್ನು ಉಲ್ಲೇಖಿಸುವ ಪ್ರಾರಂಭದ ಶಾಸನಗಳೆಲ್ಲವೂ ಹೊಯ್ಸಳರವೇ ಆಗಿದ್ದು ಅವುಗಳಲ್ಲಿ ಅನೇಕ ಶಾಸನಗಳು ತಮಿಳಿನಲ್ಲಿವೆ. ಹೊಯ್ಸಳರು ಈ ನಾಡಿನಲ್ಲಿ ಈ ರೀತಿ ತಮಿಳಿನಲ್ಲಿ ಶಾಸನಗಳನ್ನು ಹಾಕಿಸುವ ಸಂಪ್ರದಾಯವು ಸುಮಾರು ಕ್ರಿ.ಶ. 1305ರ ವರೆಗೂ ಮುಂದುವರಿದದ್ದು ಕಂಡು ಬರುತ್ತದೆ. ಅಂದರೆ ಹೊಯ್ಸಳ ಮೂರನೇ ವೀರಬಲ್ಲಾಳನ ಆಳಿಕೆಯ ಪ್ರಾರಂಭದ ಕೆಲವು ವರ್ಷಗಳ ಅನಂತರ ಕನ್ನಡ ಶಾಸನಗಳ ಸಂಖ್ಯೆ ವೃದ್ಧಿಸತೊಡಗಿತಲ್ಲದೆ ಚೋಳರ ಪದ್ಧತಿಯಂತೆ ಮಂಡಲ, ವಳನಾಡು, ನಾಡು ಮತ್ತು ಕುಟುಂ ಎಂಬ ಪ್ರಾದೇಶಿಕ ವಿಭಾಗಗಳ ವರ್ಗೀಕರಣ ಪದ್ಧತಿಯನ್ನು ಕೈಬಿಟ್ಟಿರುವುದು ಕೂಡ ಕಂಡುಬರುತ್ತದೆ.

ಎಲಹಂಕವು ಒಂದು ನಾಡಿನ ಕೇಂದ್ರಸ್ಥಳವಾಗಿದ್ದಂತೆಯೇ ಹೊಯ್ಸಳ ಮಾಂಡಲಿಕರ ನೆಲೆವೀಡು ಆಗಿದ್ದಿತು.[15] ಕ್ರಿ.ಶ. 1267ರ ದೊಡ್ಡಬಳ್ಳಾಪುರದ ಕೋಟೆಯ ಶಾಸನದಲ್ಲಿ ಹೊಯ್ಸಳ ಚಕ್ರವರ್ತಿ ವೀರ ನರಸಿಂಹದೇವನು ರಾಜ್ಯವನ್ನಾಳುತ್ತಿರುವಾಗ "ಶ್ರೀಮನ್ಮಹಾ ಮಂಡಲೇಶ್ವರಂ ತ್ರಿಭುವನ ಮಲ್ಲ ನಂದಗಿರಿನಾಥ, ಭಂಗಿ ಕುಲ ಕಮಳ ವಿಕಸಿತ ಕಮಲ ದಿವಾಕರಂ ಸಿತಗರ ಗಂಡ ಸೆಣಸುವವರ ಗಂಡ ವೈರಿ ವೃಷಭ ಶಾರ್ದೂಳ ಅಣ್ಣನಂಕಕಾಜಿ ದೇಪದೇವರಸರು ಯಲಹಂಕ ನೆಲೆವಿಡಿನೊಳು ಸುಖಸಂಕಥಾ ವಿನೋದದಿಂದ" ರಾಜ್ಯ ಪಾಲನೆ ಮಾಡುತ್ತಿದ್ದ ವಿಷಯದಿಂದ ಈ ಅಂಶ ಸ್ಪಷ್ಟವಾಗುತ್ತದೆ.

ಪ್ರಾರಂಭದ ಶಾಸನಗಳಲ್ಲಿ ಎಲಹಂಕನಾಡು ರಾಜೇಂದ್ರ ಚೋಳ ವಳನಾಡಿನ

ಭಾಗವಾಗಿದ್ದಿತು. ರಾಜೇಂದ್ರ ಚೋಳ ವಳನಾಡು ನಿಗರಿಲಿ ಚೋಳ ಮಂಡಲದ ಭಾಗವೆಂಬುದು ಅನೇಕ ಶಾಸನಗಳಿಂದ ತಿಳಿದುಬರುತ್ತದೆ.[16]

ಕ್ರಿ.ಶ. 1301ರ ಗುಂಜೂರು, ಅಯ್ಯಗೌಡಪುರ ಹಾಗೂ ಮಡಿವಾಳ ಗ್ರಾಮಗಳ ಶಾಸನಗಳಲ್ಲಿ "ಇಲ್ಲೈಪಾಕ್ಕನಾಟ್ಟು" ಅಂದರೆ ಎಲಹಂಕನಾಡು ಹೆಸರ್ ಕುಂದಾಣಿ ರಾಜ್ಯದ ನಾಡುಗಳಲ್ಲಿ ಒಂದಾಗಿದ್ದಿತೆಂದು ತಿಳಿದುಬರುತ್ತದೆ. ಈ ಶಾಸನಗಳು ಈ ರಾಜ್ಯಕ್ಕೆ ಸೇರಿದ ಇತರ ನಾಡುಗಳಾದ ವಿರವಿನಾಡು, ಮಾಶಂಡಿನಾಡು, ಮುರುಶುನಾಡು, ಶೊಕ್ಕನಾಯನ್‌ಪಟ್ರು, ಪೆಣ್ಣೈಯಾಣ್ಣಾರ್ ಮಡನಾಡು, ಐಂಬುಟುಗೂರುನಾಡು, ಎಲವೂರ್‌ನಾಡು, ಕುವಳಾಳ ನಾಡು ಮತ್ತು ಕೈವಾರ ನಾಡುಗಳನ್ನು ಹೆಸರಿಸುತ್ತವೆ.[17] ಇವುಗಳಲ್ಲಿ ಬಹಳಷ್ಟು ನಾಡುಗಳು ಎಲಹಂಕ ನಾಡಿನ ಆಸುಪಾಸಿನ ನಾಡುಗಳೇ ಆಗಿದ್ದವು. ಆದರೆ ಇಲ್ಲಿ ಉಕ್ತವಾಗಿರುವ ಹೆಸರ್ ಕುಂದಾಣಿ ರಾಜ್ಯದ ವಿಸ್ತಾರವನ್ನಾಗಲೀ ಅಥವಾ ಕೇಂದ್ರಸ್ಥಳವನ್ನಾಗಲೀ ನಿರ್ದಿಷ್ಟ ವಾಗಿ ನಿರ್ದೇಶಿಸಲು ಸಾಧ್ಯವಾಗುತ್ತಿಲ್ಲವಾದರೂ ಬೆಂಗಳೂರಿನ ನೆರೆಯ ಜಿಲ್ಲೆಯಾದ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಕುಂದಾಣವೇ ಈ ರಾಜ್ಯದ ಕೇಂದ್ರಸ್ಥಳ ವಾಗಿರಬೇಕು. ಏಕೆಂದರೆ, ಇದು ಹೊಯ್ಸಳ ವೀರ ರಾಮನಾಥನ ರಾಜಧಾನಿ ಗಳಲ್ಲಿ ಒಂದಾಗಿದ್ದಿತು. ಬೆಂಗಳೂರು ಜಿಲ್ಲೆಯ ದೇವನಹಳ್ಳಿ ತಾಲೂಕಿನಲ್ಲೂ ಕುಂದಾಣವೆಂಬ ಗ್ರಾಮವಿದೆ.

ಕ್ರಿ.ಶ, 1532ರ ನೆಲಮಂಗಲ ತಾಲೂಕಿನ ಹೆಸರುಘಟ್ಟ ಗ್ರಾಮದ ಶಾಸನ ವೊಂದರಲ್ಲಿ "ಚೇಲೂರು ಚಾವಡಿಗೆ ಸಲುವ ಎಲಹಂಕ ನಾಡ ಸಿವನ ಸಮುದ್ರ ಸೀಮೆಯೊಳಗಣ ಕಾಕೋಳಲ ಸ್ಥಳ" ಎಂಬ ವಿವರವಿದೆ.[18] ಇದರಿಂದ ಈ ನಾಡು ವಿಜಯನಗರ ಸಾಮ್ರಾಟರ ಕಾಲದಲ್ಲಿ ಚೇಲೂರು ಚಾವಡಿಗೆ ಸಲುವ ನಾಡಾಗಿದ್ದಿತು. ಸಿವನ ಸಮುದ್ರವೆಂಬುದು ಹೆಸರುಘಟ್ಟ ಗ್ರಾಮದ ಪ್ರತಿನಾಮ. ಕಾಕೋಳಲ ಎಂಬುದು ಇದೇ ತಾಲೂಕಿನ ಇಂದಿನ ಕಾಕೋಳಗ್ರಾಮವೇ ಆಗಿದೆ. ಅಲ್ಲಾಳ ಸಂದ್ರ ಗ್ರಾಮವು ಸಿವನ ಸಮುದ್ರ ಸೀಮೆಗೆ ಸೇರಿದ ಗ್ರಾಮವಾಗಿದ್ದಿತೆಂಬ ಅಂಶ ಕ್ರಿ.ಶ. 1540ರ ಅದೇ ಗ್ರಾಮದ ಶಾಸನದಿಂದ ತಿಳಿದುಬರುತ್ತದೆ.[19] ಕ್ರಿ.ಶ. 1490ರ ದಾಸರಹಳ್ಳಿ ಶಾಸನದಲ್ಲಿ ಚೊಕ್ಕಸಹಳ್ಳಿ ಎಂಬ ಗ್ರಾಮವು ಈ ಸೀಮೆಗೆ ಸೇರಿದ್ದಿತೆಂದು ಉಲ್ಲೇಖವಿದೆ.[20] ಈ ಸೀಮೆಯನ್ನು ಉಲ್ಲೇಖಿಸುವ ಇನ್ನೊಂದು ಶಾಸನವು ಕ್ರಿ.ಶ. 1538ಕ್ಕೆ ಸೇರಿದ್ದು, ಕಾವಲ್‌ಭೈರಸಂದ್ರ ಗ್ರಾಮದ್ದಾಗಿದೆ.[21]

ಎಲಹಂಕ ನಾಡನ್ನು ಉಲ್ಲೇಖಿಸುವ ಸುಮಾರು 65 ಶಾಸನಗಳು ಈ ಜಿಲ್ಲೆ ಯಲ್ಲಿದ್ದು ಅವು ಸುಮಾರು 40 ಗ್ರಾಮಗಳಲ್ಲಿ ದೊರಕಿರುತ್ತವೆ. ಈ ಶಾಸನ ಗಳಲ್ಲಿ ಎಲಹಂಕನಾಡಿಗೆ ಸೇರಿದ ಶಾಸನೋಕ್ತ ಗ್ರಾಮಗಳ ವಿವರ ಈ ರೀತಿ ಇದೆ :

ಬೆಂಗಳೂರು ತಾಲೂಕಿನ,[22] ದೊಂಬಲೂರು (ತೊಂಬಲೂರು) ಎಂಬ ದೇಶಿಯ ಮಾಣಿಕ್ಯ ಪಟ್ಟಣ, ಇರುಂಬಿಲಿಯೂರು (ಇಬ್ಬಲೂರು) ಎಂಬ ವೀರ ಬಲ್ಲಾಳ ಚತುರ್ವೇದಿ ಮಂಗಲ, ಕುಂಜಿಯೂರು (ಗುಂಜೂರು), ಕಾಡು ವೆಳಿಯಕ್ಕಿಪಳ್ಳಿ, ಹಾರವುರ ವೂರ ಕೋಟೆ, ಗಂಗನಾರಾಯಣ ಚತುರ್ವೇದಿ ಮಂಗಲ, ಸೋಮಿದೇವನ ಹಳ್ಳಿ, ಕಾಳಿತಮ್ಮನ ಹಳ್ಳಿ, ಪೇತೇದ್ರಿ ಪಾವಿನಕೆರೆ, ಹುರವಾ ಮಾರಾಡಿ ಕೆಜ[3], ನಾಗವಾರ, ನಾಗಿಸೆಟ್ಟಿಹಳ್ಳಿ, ಜಾಲಹಳ್ಳಿ, ಜಕ್ಕೂರು, ದೇವ ಸಮುತ್ತಿರಂ (ದೇವಸಂದ್ರ), ಜೂಬನಹಳ್ಳಿ, ಚೊಕ್ಕನಹಳ್ಳಿ, ಅಲ್ಲಾಳ ಸಂದ್ರ ಮುಂತಾದ ಗ್ರಾಮಗಳು.

ದೇವನಹಳ್ಳಿ ತಾಲೂಕಿನ,[23] ಕುದಿರ್ಕ್ಕರೈ ಎಂಬ ರಾಮನಾಥ ಚತುರ್ವೇದಿ ಮಂಗಲ, ಸುರತೇನುಪುರ, ಜಾಲತಜುಬನಹಳ್ಳಿ, ಆನೂಡಳ ಕೋಡಿಪುರ, ಬೇಗೂರ, ಸೋಮಪಂನ ಕೆರೆ, ಹೋಜಾಲ, ಜಾಲಿಗೆ ಕೊಡಿಗೆ ಹಳ್ಳಿ, ಚಿಕ್ಕಜಾಲ ಎಂಬ ವಿಷ್ಣುವರ್ಧನ ಚತುರ್ವೇದಿ ಮಂಗಲ ದುಂಡಿಗೇನಹಳ್ಳಿ, ದೇವರಾಯ ಸಮುದ್ರ ಮುಂತಾದವು.

ದೊಡ್ಡಬಳ್ಳಾಪುರ ತಾಲೂಕಿನ[24] ಕುಜುವಗೆಜ[3], ನಂದಿಗುಂದ, ಮಲದೀಪನ ಪುರ ಮುಂತಾದವು.

ನೆಲಮಂಗಲ ತಾಲೂಕಿನ[25] ಐವರ ಕಂಡ ಪುರ, ಹೆಸರುಘಟ್ಟವೆಂಬ ಸಿವನ ಸಮುದ್ರ, ದಾನೇನಹಳ್ಳಿ, ಸೋಲದೇವನಹಳ್ಳಿ, ದೊಡ್ಡಹಳ್ಳಿ, ಹುರಳಿಚಿಕ್ಕನಹಳ್ಳಿ ಕಾಕೋಳಲ ಮುಂತಾದವು.

ಹೊಸಕೋಟೆ ತಾಲೂಕಿನ[26] ಬಯಿರತ್ತಿ ಮುಂತಾದವು.

ಮಾಗಡಿ ತಾಲೂಕಿನಲ್ಲಿ ಎಲಹಂಕ ನಾಡ ಗೌಡ ಪ್ರಭುಗಳ ಅನೇಕ ಶಾಸನ ಗಳಿದ್ದಾಗ್ಯೂ ಅವೆಲ್ಲವೂ ಮಾಗಡಿ ಸೀಮೆಯ ಪ್ರಸ್ತಾಪವನ್ನು ಮಾಡುತ್ತವೆಯೋ ಹೊರತು ಅದು ಯಲಹಂಕ ನಾಡಿನ ಭಾಗವೆಂದು ಯಾವ ಶಾಸನದಲ್ಲೂ ಹೇಳಿರು ವುದಿಲ್ಲ. ತುಮಕೂರು ಜಿಲ್ಲೆಯ ಕುಣಿಗಲ್ ತಾಲೂಕಿನಲ್ಲೂ ಇವರ ಶಾಸನಗಳು ದೊರೆಯುತ್ತವೆ.

ಎಲಹಂಕ ನಾಡಿನ ಊರುಗಳೆಂದು ಶಾಸನೋಕ್ತವಾಗಿರುವ ಮೇಲಿನ ಅನೇಕ ಗ್ರಾಮಗಳು ಈಗಲೂ ಅಸ್ತಿತ್ವದಲ್ಲಿದ್ದು ಅವುಗಳನ್ನು ಗುರುತಿಸಬಹುದಾಗಿದೆ.

**ರಾಜಕೀಯ :** ರಾಜಕೀಯವಾಗಿ ಎಲಹಂಕನಾಡು ಕಾಲಕಾಲಕ್ಕೆ ಬೇರೆ ಬೇರೆ ರಾಜಮನೆತನಗಳ ಆಡಳಿತಕ್ಕೆ ಒಳಪಡುತ್ತಾ ಬಂದಿತು. ಹನ್ನೊಂದನೆಯ ಶತಮಾನ

ದಲ್ಲಿ ಚೋಳರ ರಾಜರಾಜ ಕೇಸರಿವರ್ಮನಾದ ರಾಜರಾಜ ದೇವನ ಆಡಳಿತಕ್ಕೆ ಒಳಪಟ್ಟಿದ್ದಿತು.

ಕ್ರಿ.ಶ. 1200ರ ಸುಮಾರಿಗೆ ಈ ನಾಡು ಹೊಯ್ಸಳರ ಕೈಸೇರಿತು ಎಂದು ಹೇಳಬಹುದು. ಕ್ರಿ.ಶ. 1267ರ ಸುಮಾರಿಗೆ ಹೊಯ್ಸಳ ವೀರನಾರಸಿಂಹದೇವ, ಕ್ರಿ.ಶ. 1288ರ ಸುಮಾರಿನಲ್ಲಿ ಹೊಯ್ಸಳ ವೀರರಾಮನಾಥರ ಆಳಿಕೆಗೆ ಒಳಪಟ್ಟಿದ್ದಿತು. ಕ್ರಿ.ಶ. 1301ರ ಸುಮಾರಿಗೆ ಹೊಯ್ಸಳ ವೀರಬಲ್ಲಾಳನ ಆಳಿಕೆಗೆ ಒಳಪಟ್ಟು ಕ್ರಿ.ಶ. 1342ರ ವರೆಗೂ ಮುಂದುವರಿದಿರುವುದು ಕಂಡುಬರುತ್ತದೆ.[27]

ಕ್ರಿ.ಶ. 1348ರ ದೇವನಹಳ್ಳಿ ತಾಲೂಕಿನ ಜಾಲದ ಹೋಬಳಿಗೆ ಸೇರಿದ ಕಟಿಗೇನಹಳ್ಳಿ ಶಾಸನದ ಕಾಲದಿಂದ ಎಲಹಂಕ ನಾಡು ವಿಜಯನಗರ ಅರಸರ ಆಡಳಿತಕ್ಕೆ ಒಳಪಟ್ಟಿತು.[28] ಹರಿಹರ (1348), ಬುಕ್ಕಣ್ಣ (1365 ಮತ್ತು 1367), ಕಂಪ ಒಡೆಯ (1364)—ಈತ ಬುಕ್ಕಣ್ಣನ ಒಬ್ಬ ಮಗ. ಕಾಮಯ ನಾಯಕ (1364)—ಈತ ಬುಕ್ಕಣ್ಣನ ಇನ್ನೊಬ್ಬ ಮಗ. ಹರಿಯಪ್ಪ ಒಡೆಯ (1386), ದೇವರಾಯ (1410), ಅಚ್ಯುತರಾಯ (1532) ಮುಂತಾದವರು ಈ ನಾಡನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದರು.[29] ವಿಶೇಷವಾಗಿ ಪ್ರಭುಗೌಡು ಗಳೆಂದು ಖ್ಯಾತರಾಗಿದ್ದ ಗೌಡಕುಲದವರು ಹೊಯ್ಸಳರ ಕಾಲದಿಂದಲೂ ಈ ನಾಡಿನ ಸ್ಥಳೀಯ ಆಡಳಿತಗಾರರಾಗಿದ್ದ ಅಂಶವು ಅನೇಕ ಶಾಸನಗಳಿಂದ ತಿಳಿದುಬರುತ್ತದೆ, ಅಲ್ಲದೆ ಈ ನಾಡ ಗೌಡುಗಳ ಆಳಿಕೆಯು ಈ ನಾಡಿನ ಮೇಲೆ ಅತ್ಯಂತ ಪ್ರಭಾವಶಾಲಿಯಾಗಿದ್ದಿತು. ಈ ನಾಡ ಗೌಡುಗಳ ಅಧಿಕಾರದ ವ್ಯಾಪ್ತಿ ಕೇವಲ ಎಲಹಂಕ ನಾಡಿನ ಮೇಲಷ್ಟೇ ಅಲ್ಲದೆ, ನೆರೆಹೊರೆಯ ನಾಡುಗಳ ಮನ್ನೆಯರ ಮೇಲೆಲ್ಲ ಇದ್ದಿತೆಂಬ ಅಂಶವು ಶಿಷ್ಟ ಹಾಗೂ ಜಾನಪದ ಸಾಹಿತ್ಯಾಧಾರಗಳಿಂದ ದೃಢಪಡುತ್ತದೆ.[30] ಶಾಸನಗಳು ಮಾತ್ರ ಈ ವಿಷಯದಲ್ಲಿ ಮೌನ ತಾಳಿವೆ. ಆದರೆ ಎಲಹಂಕ ನಾಡಿನ ನೆರೆಯ ಮಾಗಡಿ ದುರ್ಗ ಅಥವಾ ಮಾಗಡಿ ಸೀಮೆ ಮತ್ತು ತುಮಕೂರು ಜಿಲ್ಲೆಯ ಕುಣಿಗಲ್ ತಾಲೂಕಿನ ಹಲವು ಗ್ರಾಮಗಳು ಇವರ ನೇರ ಆಡಳಿತದಲ್ಲಿದ್ದುವು. ಕರ್ಲಮಂಗಲಂ ಶ್ರೀ ಶ್ರೀಕಂಠಯ್ಯನವರು ಶಾಸನಗಳು ಮತ್ತು ಸಾಹಿತ್ಯಾಧಾರಗಳನ್ನು ಆದರಿಸಿ ಈ ನಾಡ ಪ್ರಭುಗಳ ವಂಶಾವಳಿಯನ್ನು ಪುನಾರಚಿಸಿದ್ದಾರೆ.[31] ಆ ವಂಶಾವಳಿಯಲ್ಲಿ ಮೊದಲ ಇಬ್ಬರನ್ನು ಬಿಟ್ಟರೂ, ಜೈರೇದೇವ, ಮಾರಗೌಡ, ಕಂಪ ಗೌಡ (1264–1342), ಜಯಪ್ಪಗೌಡ (ಸು. ಕ್ರಿ.ಶ. 1342–1400 ?) ಗಿಡ್ಡಪ್ಪಗೌಡ (ಸು. ಕ್ರಿ.ಶ. 1400–1450 ?), ನಾಚಪ್ಪಗೌಡ (ಸು. ಕ್ರಿ.ಶ. 1450 – 1500 ?), ಕೆಂಪನಾಚಪ್ಪಗೌಡ (ಸು. ಕ್ರಿ.ಶ. 1500–1531 ?) ಹಿರಿಯ ಕೆಂಪೇಗೌಡ (ಕ್ರಿ.ಶ. 1531–1608), ಇಮ್ಮಡಿ ಕೆಂಪೇಗೌಡ (ಕ್ರಿ.ಶ. 1597–1656), ಮುಮ್ಮಡಿ ಕೆಂಪೇಗೌಡ (ಕ್ರಿ.ಶ. 1656-1681), ದೊಡ್ಡ

ವೀರಪ್ಪಗೌಡ (ಕ್ರಿ.ಶ. 1681–1697), ಕೆಂಪವೀರಪ್ಪಗೌಡ (ಕ್ರಿ.ಶ. 1697–1716), ಇವರುಗಳು ತುಂಬ ಜನಾನುರಾಗಿಗಳಾಗಿ ಆಡಳಿತ ನಡೆಯಿಸಿರುತ್ತಾರೆ.

ಈ ವಂಶಾವಳಿಯಲ್ಲಿ ಹಿರಿಯ ಕೆಂಪೇಗೌಡನಿಂದ ಈಚಿನವರ ಜೀವನ ವೃತ್ತಾಂತಗಳನ್ನು ತಿಳಿಯಲು ಶಾಸನಗಳ ಜೊತೆಗೆ ಏಕಾಂಬರ ಶಾಸ್ತ್ರಿ ವಿರಚಿತ 'ವೀರಭದ್ರ ವಿಜಯ' ಗುಂಬಳಾಪುರದ ಗುರು ನಂಜೇಶ್ವರನ 'ಕೆಂಪೇಗೌಡನ ಜಯಪ್ರಶಸ್ತಿ' ಮುಂತಾದ ಕೃತಿಗಳು ಸಾಕಷ್ಟು ವಿವರಗಳನ್ನು ನೀಡುತ್ತವೆ. ಈ ವಂಶಾವಳಿಯಲ್ಲಿ ಇಮ್ಮಡಿ ಕೆಂಪೇಗೌಡನು 'ಚಿಕ್ಕದೊರೆ' ಎಂದು ಖ್ಯಾತನಾಗಿದ್ದು ವಿಜಯನಗರ ಅರಸ ವೆಂಕಟಪತಿರಾಯನ ಮೆಚ್ಚಿನವನಾಗಿದ್ದನು.

**ಮಹಾಪ್ರಧಾನರು :** ಈ ನಾಡನ್ನು ಉಲ್ಲೇಖಿಸುವ ಶಾಸನಗಳಲ್ಲಿ ಕಂಡು ಬರುವ ಹೊಯ್ಸಳರ ಮತ್ತು ವಿಜಯನಗರ ಅರಸರ ಮಹಾಪ್ರಧಾನರೆಂದರೆ ಮಹಾಪ್ರಧಾನ ಪುಣಿಸ ಅಥವಾ ಪೊನ್ನಣ್ಣ. ಇವನ ಹೆಸರು ದೊಡ್ಡಬಳ್ಳಾಪುರ, ದೇವನಹಳ್ಳಿ ತಾಲೂಕುಗಳ ಕ್ರಿ.ಶ. 1329ರ ಶಾಸನಗಳಲ್ಲೂ[32] ಮತ್ತು ಕ್ರಿ.ಶ. 1330ರ ಹೊಸಕೋಟೆ ತಾಲೂಕಿನ ಶಾಸನದಲ್ಲೂ ಉಕ್ತವಾಗಿದೆ.[33]

ಮಹಾಪ್ರಧಾನ ಕಾಮಯ ದಣ್ಣಾಯಕನ ಹೆಸರು ಕ್ರಿ.ಶ. 1341ರ ಶಾಸನದಲ್ಲಿ ಬಂದಿದೆ.[34]

ಕ್ರಿ.ಶ. 1410ರ ದೇವನಹಳ್ಳಿ ತಾಲೂಕಿನ ಶಾಸನದಲ್ಲಿ ಮಹಾಪ್ರಧಾನ ಒರಣ ದಣ್ಣಾಯಕ ಒಡೆಯನ ಉಲ್ಲೇಖವಾಗಿದೆ,[35]

**ಮಹಾ ಸಾಮಂತಾಧಿಪತಿಗಳು :** ಮಹಾ ಸಾಮಂತಾಧಿಪತಿ ಮಂಚೆಯ ನಾಯಕನ ಮಗ ಗುಣಣ್ಣ (ಕ್ರಿ.ಶ, 1338), ಪೆಂಮಯ ದೇವರಸನ ಮಕ್ಕಳು ಅಲ್ಲಯ್ಯ (ಕ್ರಿ.ಶ. 1342). ಚಿಕ್ಕಬೈರೆನಾಯಕನ ಮೈದುನ ಸೋಳಯ ನಾಯಕ (ಕ್ರಿ.ಶ. 1342). ಚಿಕ್ಕಬೈರೆನಾಯಕನ ಮಗ ಹೊಂನ್ನಯ ನಾಯಕ (ಕ್ರಿ.ಶ. 1342), ಮೈಲಿಮಮಲಯ ನಾಯಕ (ಕ್ರಿ.ಶ. 1349). ಮಲೆಯ ರಾಯರ ಗಂಡ ಲಿಂಗಮನಾಯಕ (ಕ್ರಿ.ಶ. 1367), ಮಲಯ ನಾಯಕನ ಕುಮಾರ ದೇವ ನಾಯಕ (ಕ್ರಿ.ಶ. 1376), ನರಲೋಕ ಗಂಡ ಮಯಿಲೆಯ ನಾಯಕರ ಕುಮಾರ ಕೋಟೆಯ ನಾಯಕ (ಕ್ರಿ.ಶ. 1386)—ಮುಂತಾದವರು ಈ ನಾಡಿನ ಮಹಾ ಸಾಮಂತಾಧಿಪತಿಗಳಾಗಿ ಮತ್ತು ಸಾಮಂತಾಧಿಪತಿಗಳ ಸಮೀಪಬಂಧುಗಳಾಗಿ ಅಧಿಕಾರವನ್ನು ನಡೆಯಿಸಿರುವ ಉಲ್ಲೇಖಗಳು ಶಾಸನಗಳಲ್ಲಿ ಬಂದಿವೆ.[36]

**ಮಹಾ ಪಸಾಯಿತರು :** ಮಹಾ ಪಸಾಯಿತ ಶಾಂಡಿಲ್ಯನ್ ಕೋಯಿಲ್ ಮೊದಲಿಯಾರ್ (ಕ್ರಿ.ಶ. 1297)ನ ಉಲ್ಲೇಖ ದೊಂಬಲೂರಿನ ಶಾಸನದಲ್ಲಿ

ಬಂದಿದೆ.[37] ಕ್ರಿ.ಶ. 1342ರ ಕಾಗೆಗರಪಳ್ಳಿಯ ಶಾಸನದಲ್ಲಿ ಮೀಸೆಯರ ಗಂಡ ಚಿಕ್ಕಬೈರೆನಾಯಕರು ಹಾಗೂ ಅವರ ಕುಮಾರ ಚೋಳಯ ನಾಯಕರುಗಳ ಹೆಸರುಗಳೂ ಕಂಡುಬರುತ್ತವೆ.[38]

**ಸರ್ವಾಧಿಕಾರಿಗಳು :** ಈ ನಾಡಿನ ಶಾಸನಗಳಲ್ಲಿ ಸರ್ವಾಧಿಕಾರಿಗಳ ಉಲ್ಲೇಖಗಳು ವಿರಳ. ಹೆಬ್ಬಾಳ ಗ್ರಾಮದ ಶಾಸನವೊಂದರಲ್ಲಿ ಉರಿಯಣ್ಣ ಎಂಬವನ ಉಲ್ಲೇಖವಿದೆ. ಈ ಶಾಸನದ ಕಾಲ ಕ್ರಿ.ಶ. 1308.[39]

**ದಂಡನಾಯಕರು :** ಕ್ರಿ.ಶ. 1305ರ ಬೆಂಗಳೂರು ಜಿಲ್ಲೆಯ ಶಿಂಗಿನಾಯಕನ ಹಳ್ಳಿಯ ಶಾಸನದಲ್ಲಿ ಪೆರುಮಾಳದೇವ ದಂಣಾಯಕನ ಹೆಸರು ಉಕ್ತವಾಗಿದೆ.[40] ಕ್ರಿ.ಶ. 1308ರ ಶಾಸನವೊಂದರಲ್ಲಿ ದಂಡನಾಯಕ ಮುದೆಯ ಅಲ್ಲಪ್ಪ ದಂಣಾಯಕನು ಎಲಹಂಕನಾಡನ್ನಾಳುತ್ತಿದ್ದ ವಿವರವಿದೆ.[41] ಶ್ರೀಮೆಯ ದಂಣಾಯಕ ಎಲಹಂಕನಾಡನ್ನು ಆಳುತ್ತಿದ್ದ ವಿವರ ಕ್ರಿ.ಶ. 1329ರ ದೊಡ್ಡಬಳ್ಳಾಪುರ ತಾಲೂಕಿನ ಹಾಡೋಣಹಳ್ಳಿ ಶಾಸನದಲ್ಲಿ ಬಂದಿದೆ.[42] ಈತನು ಮಹಾಪ್ರಧಾನ ಪೊಂನ್ನಣ್ಣನ ಮಗನು. ಚಿಕ್ಕಜಾಲದ ಕ್ರಿ.ಶ. 1329ರ ಶಾಸನವೊಂದರಲ್ಲಿ ಶ್ರೀಹ್ಮೊಯ ದಂಣಾಯಕನ ಉಲ್ಲೇಖವಿದ್ದು, ಇವನೂ ಮಹಾಪ್ರಧಾನ ಪೊಂನ್ನಣ್ಣನ ಮಗನೆಂದು ತಿಳಿದುಬರುತ್ತದೆ.[43] ಇದೇ ವರ್ಷದ ದೊಡ್ಡಬಳ್ಳಾಪುರ ತಾಲೂಕಿನ ಶಾಸನವೊಂದರಲ್ಲಿ ಕಾಮಯ ದಂಣಾಯಕರ ಹೆಸರು ಕಂಡುಬರುತ್ತದೆ.[44] ಹೊಸಕೋಟೆ ತಾಲೂಕಿನ ಕ್ರಿ.ಶ. 1330ರ ಶಾಸನದಲ್ಲೂ ಇವನ ಹೆಸರು ಉಲ್ಲೇಖವಾಗಿದೆ.[45]

**ಸುಂಕದ ಅಧಿಕಾರಿ :** ಈ ನಾಡಿನ ಸುಂಕದ ಅಧಿಕಾರಿಯಾಗಿದ್ದ ರಾಮರಸರ ಮಕ್ಕಳು ದೇವರಸರೆಂಬ ಒಬ್ಬನನ್ನು ಉಲ್ಲೇಖಿಸುವ ಶಾಸನವೊಂದು ದೇವನಹಳ್ಳಿ ತಾಲೂಕಿನಲ್ಲಿದೆ. ಈ ಶಾಸನದ ಕಾಲ ಕ್ರಿ.ಶ. 1382.[46]

**ನಾಡ ಶಾನಬೋವ :** ಎಲಹಂಕನಾಡ ಶಾನಬೋವನಾಗಿ ಕ್ರಿ.ಶ. 1329 ರಿಂದ 1342ರ ವರೆಗೆ ಅಲ್ಲಾಳದೇವ ಅಥವಾ ಅಲ್ಲಾಳಜೀಯನೆಂಬವನು ಪ್ರಖ್ಯಾತನಾಗಿದ್ದನು. ಇವನ ಹೆಸರನ್ನು ಉಲ್ಲೇಖಿಸುವ ಅನೇಕ ಶಾಸನಗಳು ಈ ನಾಡಿನ ಉಲ್ಲೇಖದೊಂದಿಗೆ ಕಂಡುಬರುತ್ತವೆ. ಇವನು ಅನೇಕ ದಾನಗಳನ್ನು ಪಡೆದಿರುವಂತೆಯೇ ಅನೇಕ ದಾನಗಳನ್ನು ನೀಡುವಲ್ಲಿಯೂ ಪಾತ್ರವಹಿಸಿರುವುದು ಕಂಡುಬರುತ್ತದೆ.[47] ಕ್ರಿ.ಶ.1349ರ ಅನಂತರದ ಶಾಸನಗಳಲ್ಲಿ ಇವನನ್ನು ನಾಡಗೌಡುಗಳ ಸಾಲಿನಲ್ಲಿ ಸೇರಿಸಿರುವ ಅಂಶ ಚಕಿತಗೊಳಿಸುವಂತಹುದಾಗಿದೆ.[48] ಹಾಗೆಯೇ ಇವನ ಮಗ ತಣ್ಣಿಯಪ್ಪ ಅಥವಾ ತಣ್ಣಿಯಾಳ್ವನೆಂಬವನನ್ನು ಈ ನಾಡ ಗೌಡರ ಸಾಲಿನಲ್ಲಿ ಕ್ರಿ.ಶ. 1364ರ ಶಾಸನವೊಂದು ಉಲ್ಲೇಖಿಸುತ್ತದೆ.[49]

**ನಾಡಪ್ರಭು ಗೌಡುಗಳು :** ಶಾಸನಗಳಲ್ಲಿ ಅನೇಕ ನಾಡ ಪ್ರಭು ಗೌಡುಗಳ ಉಲ್ಲೇಖಗಳು ಕಂಡುಬರುತ್ತವೆ. ಕ್ರಿ.ಶ. 1329ರ ಶಾಸನವೊಂದರಲ್ಲಿ[50] ಮಯಿಲ ಗವುಡ, ಮಾರಗವುಡ, ಮಲಯ ಗವುಡ, ತಾಯಿಯಪ್ಪ ಗೌಡ ಎಂಬ ನಾಲ್ಕು ಜನ ನಾಡಪ್ರಭು ಗೌಡುಗಳ ಉಲ್ಲೇಖವಿದ್ದರೆ, ಕ್ರಿ.ಶ. 1342ರ ಶಾಸನವು ಬಯಿರೇದೇವ, ಮಾರಗವುಡ, ತಾಯಿಯಪ್ಪ, ಮಾಚಿದೇವ, ಕಂನಗೌಡ ಎಂಬ ಐದು ಜನರು ಎಲಹಂಕ ನಾಡ ಪ್ರಭು ಗೌಡುಗಳೆಂದು ಉಲ್ಲೇಖಿಸುತ್ತದೆ.[51] ಅದೇ ವರ್ಷದ ಇನ್ನೊಂದು ಶಾಸನದಲ್ಲಿ ಬಯಿರೆದೇವ, ಮಾಚಿದೇವ, ಕಂನಗೌಡರುಗಳು ಪ್ರಭುಗೌಂಡುಗಳೆಂದು ಹೇಳಲಾಗಿದೆ.[52] ದೇವನಹಳ್ಳಿ ತಾಲೂಕಿನ ಶಾಸನವೊಂದ ರಲ್ಲಿ ಬೈರಿದೇವ, ಮಾಚಿದೇವ, ಕಂನಗೌಡ, ಬೈಯಪ್ಪ ಅಲ್ಲಾಳ ಜೀಯ ಮುಂತಾದ ವರನ್ನು ಉಲ್ಲೇಖಿಸಲಾಗಿದೆ.[53] ಹೊಸಕೋಟೆ ತಾಲೂಕಿನ ಕ್ರಿ. ಶ. 1367ರ ಶಾಸನದಲ್ಲಿ ಈ ಮೇಲೆ ಉಲ್ಲೇಖಿಸಿರುವ ಹಲವು ಗೌಡರ ಜೊತೆಗೆ ಶಾಲಿಯಪ್ಪ ಒಡೆಯ, ಯಾದವ ಬೂಡ್ದಯಪ್ಪ, ತಣ್ಣಿಯಾಳುವರು, ಜಿಡಗೌಡ, ವರಿಹಣ್ಣ ಮುಂತಾದವರನ್ನು ನಾಡ ಪ್ರಭು ಗೌಡುಗಳೆಂದು ಕರೆದಿರುವುದು ಕಂಡು ಬರುತ್ತದೆ.[54]

ಈ ಹಿನ್ನೆಲೆಯಲ್ಲಿ ನಾಡ ಪ್ರಭುಗೌಡುಗಳ ಆಡಳಿತ ವಿಧಾನವನ್ನು ಗಮನಿಸಿದರೆ ಅವರೆಲ್ಲ ಸಮಾನ ಅಧಿಕಾರವುಳ್ಳವರಾಗಿದ್ದಂತೆ ತೋರುತ್ತದೆ. ಇವರು ಪ್ರಾಯಶಃ ಅಂದು ಪ್ರಚಲಿತವಿದ್ದ 'ನಾಡು' ಎಂಬ ಸ್ಥಳೀಯ ಆಡಳಿತ ಸಂಸ್ಥೆಯ (ಸಭೆಯ) ಪ್ರತಿನಿಧಿಗಳಾಗಿ ಸ್ಥಳೀಯ ಆಡಳಿತದಲ್ಲಿ ಬಹಳ ಜವಾಬ್ದಾರಿಯುಳ್ಳವರಾಗಿದ್ದಿರ ಬೇಕು. ಪ್ರಭುಗೌಡನ ಸ್ಥಾನವು ಜನರಿಂದ ಆದರಿಸಲ್ಪಟ್ಟಿದ್ದಾಗಿದ್ದು ಯಾವನೇ ಜನಾನುರಾಗಿಯಾದವನು ಈ ಸ್ಥಾನವನ್ನು ಅಲಂಕರಿಸಬಹುದಿತ್ತೆಂದು ಹೇಳಬಹುದು. ಏಕೆಂದರೆ ಮೇಲಿನ ಪ್ರಭುಗವುಡುಗಳ ಪಟ್ಟಿಯಲ್ಲಿ ಬರುವ ಅಲ್ಲಾಳಜೀಯ ಮತ್ತು ಅವನ ಮಗ ತಣ್ಣಿಯಾಳುವರು ಗೌಡ ಕುಲಕ್ಕೆ ಸೇರಿದವರೇನೂ ಅಲ್ಲ. ಒಟ್ಟಾರೆ ಸ್ಥಳೀಯ ಆಡಳಿತದಲ್ಲಿ ನಾಡಗೌಡುಗಳ ಪಾತ್ರ ಗಮನಾರ್ಹವಾಗಿದ್ದಿತು.

ಅನೇಕ ವಿದ್ವಾಂಸರು ಈ ಮೇಲೆ ಉಲ್ಲೇಖಿಸಿರುವ ನಾಡ ಪ್ರಭು ಗೌಡರುಗಳ ಪಟ್ಟಿಯನ್ನು ಗಮನಿಸಿ ಅವರು ಸಹೋದರರೆಂದು ಭಾವಿಸಿರುವಂತೆ ತೋರುತ್ತದೆ.

ಎಲಹಂಕನಾಡಿನ ಇತಿಹಾಸದಲ್ಲಿ ಕ್ರಿ. ಶ. 1264 ರಿಂದ 1716 ರವರೆಗೆ ಅಂದರೆ ಮೈಸೂರು ಅರಸರ ಆಡಳಿತಕ್ಕೆ ಈ ನಾಡು ಒಳಪಡುವವರೆಗೂ ಇಲ್ಲಿನ ನಾಡ ಗೌಡ ಪ್ರಭುಗಳ ಪ್ರಭಾವ ಎದ್ದು ಕಾಣುತ್ತದೆ. ಸುಮಾರು ಕ್ರಿ.ಶ. 15ನೇ ಶತಮಾನದ ವೇಳೆಗೆ ಸ್ಥಳೀಯ ಆಡಳಿತದಲ್ಲಿ ಅಧಿಕಾರವು ಕೇಂದ್ರೀಕರಣವಾಗ ತೊಡಗಿದ ಅಂಶವನ್ನು ಶಾಸನಗಳು ಪ್ರತಿಬಿಂಬಿಸುತ್ತವೆ.

ಈ ನಾಡಗೌಡುಗಳ ಸಾಲಿನಲ್ಲಿ ಬೆಂಗಳೂರಿನ ನಿರ್ಮಾತೃ ಪ್ರಸಿದ್ಧ ಕೆಂಪೇಗೌಡನ ವಂಶಿಕರು ವಿಜಯನಗರ ಅರಸರ ಆಳಿಕೆಯ ಕಾಲದಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದರು. ಅಲ್ಲದೆ ಅವರಿಗೆ ಬಲಗೈಯಾಗಿ ನಿಂತು ಅವರ ಅನೇಕ ಯುದ್ಧಗಳಲ್ಲಿ ಭಾಗವಹಿಸಿ ಇವರು ತಮ್ಮ ಶೌರ್ಯವನ್ನು ಮೆರೆದಿದ್ದಾರೆ. ಅದರಲ್ಲೂ ಅವರ ದುರ್ದಿನಗಳಲ್ಲಿ ಅಂದರೆ ರಕ್ಕಸತಂಗಡಿಯ ಯುದ್ಧದ ಅನಂತರ ರಾಜಧಾನಿಯನ್ನು ಪೆನುಗೊಂಡೆಗೆ ಬದಲಿಸಿದ ಮೇಲೆ ವಿಜಯನಗರದ ಬಹುತೇಕ ಮನ್ನೆಯರು ಸ್ವತಂತ್ರರಾಗಲು ಹವಣಿಸಿ ವಿಜಯನಗರ ಅರಸರ ಮೇಲೆಯೇ ಎದುರು ಬೀಳುತ್ತಿದ್ದ ಸಂದರ್ಭಗಳಲ್ಲಿ ಈ ಎಲಹಂಕ ನಾಡ ಪ್ರಭುಗೌಡುಗಳು ವಿಜಯನಗರದರಸರಿಗೆ ಮೆಯ್ಗೆ ಮೈಯಾಗಿ ನಿಂತು ಸಹಕರಿಸಿರುವುದು ಕಂಡು ಬರುತ್ತದೆ.

ಈ ವಂಶಿಕರು ಎಲಹಂಕದ ನೆಲೆವೀಡಿನಲ್ಲಿಯೇ ನೆಲೆ ನಿಂತಿದ್ದರೇ ಇಲ್ಲವೆ ಎಂಬುದು ಶಾಸನಗಳಿಂದ ತಿಳಿದು ಬರುವುದಿಲ್ಲ. ಸಾವನದುರ್ಗವು ಈ ವಂಶದವರ ಸ್ಥಿರವಾದ ರಾಜಧಾನಿಯಾಗಿದ್ದಿತು ಮತ್ತು ಈಗಲೂ ಅಲ್ಲಿ ಊರಿನ ಅವಶೇಷಗಳು ಪಾಳು ಬಿದ್ದಿರುವ ವಿಜಯನಗರದಂತೆ ಕಾಣುತ್ತವೆ ಹಾಗೂ ಇದನ್ನು ನೆಲಪಟ್ಟಣವೆಂದು ಕರೆಯಲಾಗುತ್ತಿದೆ ಎಂದು ಈ ವಿಷಯದಲ್ಲಿ ಆಳವಾದ ಸಂಶೋಧನೆ ನಡೆಯಿಸಿದ್ದ ಕರ್ಲಮಂಗಲಂ ಶ್ರೀ ಶ್ರೀಕಂಠಯ್ಯನವರು ಅಭಿಪ್ರಾಯಪಟ್ಟಿರುತ್ತಾರೆ.[55]

ಒಟ್ಟಾರೆ ಈ ಎಲಹಂಕ ನಾಡ ಪ್ರಭುಗಳು ವಿಜಯನಗರ ಅರಸರ ಅತ್ಯಂತ ವಿಧೇಯ ಮನ್ನೆಯರಾಗಿ ಎಲ್ಲೆ ಮೀರದೆ ನಡೆದುಕೊಂಡು ಕೀರ್ತಿವಂತರಾದರೆಂದೇ ಹೇಳಬೇಕು. ಇವರು ವಿಜಯನಗರ ಅರಸರು ಕೈಗೊಂಡ ಅನೇಕ ಯುದ್ಧಗಳಲ್ಲಿ ತಮ್ಮ ಮೊರಸು ಸೈನ್ಯದೊಂದಿಗೆ ಭಾಗವಹಿಸಿ ಪರಾಕ್ರಮವನ್ನು ಮೆರೆದಿರುವ ವಿವರಗಳು ಗೋವಿಂದ ವೈದ್ಯನ ಕಂಠೀರವ ನರಸರಾಜ ವಿಜಯದಲ್ಲಿ ಮತ್ತು ತಿರುಮಲಾರ್ಯನ "ಚಿಕದೇವರಾಯ ವಂಶಾವಳಿ" ಎಂಬ ಕಾವ್ಯದಲ್ಲೂ ಉಕ್ತವಾಗಿದೆ.[56]

ಮೊರಸು ಸೈನ್ಯವೆಂಬುದು ಮೊರಸುನಾಡು ಪ್ರದೇಶದ ಸೈನಿಕರನ್ನೊಳಗೊಂಡ ಸೈನ್ಯವಾಗಿದ್ದಿತು. ವಾಸ್ತವವಾಗಿ ಮೊರಸುನಾಡೆಂಬ ಪ್ರಸಿದ್ಧ ಪ್ರದೇಶವು ವಿಜಯನಗರ ಅರಸರ ಕಾಲಕ್ಕೆ ಬಹಳ ಸಂಕುಚಿತಗೊಂಡು ಬೆಂಗಳೂರಿನ ದಕ್ಷಿಣಕ್ಕೆ ಅಂದರೆ ಆನೇಕಲ್ ತಾಲೂಕು, ಹೊಸಕೋಟೆ ತಾಲೂಕಿನ ದಕ್ಷಿಣ ಭಾಗ, ತಮಿಳು ನಾಡಿನ ಧರ್ಮಪುರಿ ಜಿಲ್ಲೆಯ ಹೊಸೂರು ಮತ್ತು ದೇಂಕಣಿಕೋಟೆ ಪ್ರದೇಶಕ್ಕೆ ಸೀಮಿತಗೊಂಡಿದ್ದಿತು. ಆದರೆ ಗಂಗರ ಕಾಲದಲ್ಲಿ ಇದರ ಮೇರೆ ಇನ್ನಷ್ಟು ವಿಸ್ತಾರವಾಗಿದ್ದಿತು. ಅಂದರೆ ಚಿಕದೇವರಾಯ ವಂಶಾವಳಿಯಲ್ಲಿ ಮೊರಸು ಸೈನ್ಯದ ಪ್ರದೇಶವನ್ನು ಬಳ್ಳಾಪುರ, ಕೋಲಾಲ, ಪುಂಗನೂರು, ಮಾಗಡಿ, ಬೆಂಗಳೂರು

ಮೊದಲಾದ ಪ್ರದೇಶಗಳು ಒಳಗೊಂಡಿದ್ದುವೆಂಬ ಹೇಳಿಕೆಯನ್ನು ಪುಷ್ಟೀಕರಿಸು ವಂತಿದ್ದಿತು. ಭೌಗೋಳಿಕವಾಗಿ ಈ ಪ್ರದೇಶವು ಬಯಲು ಸೀಮೆ. ಹೇಳಿಕೊಳ್ಳು ವಂತಹ ದುರ್ಗಗಳಾಗಲೀ, ದಟ್ಟವಾದ ಅರಣ್ಯಗಳಾಗಲೀ ಇದ್ದಂತಹ ಪ್ರದೇಶವಲ್ಲ. ಆದರಿಂದಾಗಿ ಈ ಪ್ರದೇಶದ ಸೈನಿಕರು ಯುದ್ಧ ನೈಪುಣ್ಯದಲ್ಲಿ ತಮ್ಮದೇ ಆದ ವಿಶಿಷ್ಟತೆಯನ್ನು ಪಡೆದುಕೊಂಡು ಅಜೇಯರಾಗಿದ್ದರೆನ್ನಬಹುದು.

ಜನಜನಿತವಾಗಿದ್ದ ಈ ಮೊರಸುನಾಡು ಪ್ರದೇಶದ ವಿಜಯನಗರ ಕಾಲದ ಮನ್ನೆಯರ ಮೇಲೆ ಎಲಹಂಕನಾಡ ಗೌಡ ಪ್ರಭುಗಳು ತಮ್ಮ ಪ್ರಭಾವ ಮತ್ತು ಅಧಿಕಾರವನ್ನು ಸ್ವಸಾಮರ್ಥ್ಯದಿಂದಲೇ ಪಡೆದು ಗೌರವಾದರಗಳಿಗೆ ಪಾತ್ರರಾಗಿದ್ದ ಅಂಶವನ್ನು ಜಾನಪದ ಹಾಗೂ ಶಿಷ್ಟ ಸಾಹಿತ್ಯಗಳೆರಡೂ ದೃಢಪಡಿಸುತ್ತವೆ.[57]

ಯುದ್ಧ ವಾದ್ಯಗಳಲ್ಲಿ ಭೇರಿಯು ಬಹು ಮುಖ್ಯವಾದದ್ದು. ತಮಿಳಿನ ಸಂಗಮ್ ಸಾಹಿತ್ಯದಲ್ಲಿ ಈ ವಾದ್ಯವನ್ನು 'ಮೊರಸು' ಎಂದು ಕರೆದಿದೆ. ಹುಲಿಯನ್ನು ಹೋರಾಟವಲ್ಲಿ ಕೊಂದ ಗೂಳಿಯ ಚರ್ಮದಿಂದ ಈ ವಾದ್ಯವನ್ನು ಮಾಡುತ್ತಿದ್ದರು. ಭೇರಿ ರಕ್ಷಣೆಯ ಸಂಕೇತವಾಗಿತ್ತು. ಪ್ರಾಯಶಃ ಯುದ್ಧಾರಂಭವನ್ನು ಘೋಷಿಸಿ ಜನರು ಯುದ್ಧಕ್ಕೆ ಸಿದ್ಧರಾಗುವಂತೆ ಮಾಡುತ್ತಿದ್ದುದರಿಂದ ಅದನ್ನು 'ಸಂರಕ್ಷಕ ಭೇರಿ' ಎಂದು ಕರೆಯುತ್ತಿದ್ದರು.[58] ಯುದ್ಧವಾದ್ಯವಾದ 'ಮೊರಸು' ಎಂಬ ಭೇರಿಗೂ ಮತ್ತು ಮೊರಸು ಸೈನ್ಯಕ್ಕೂ ಏನು ಸಂಬಂಧವಿದೆಯೋ ತಿಳಿದು ಬರುತ್ತಿಲ್ಲ.

**ದಾನದತ್ತಿಗಳು :** ಎಲಹಂಕನಾಡಿನ ದಾನದತ್ತಿಗಳಲ್ಲಿ ಹೆಚ್ಚಿನವು ದೇವಾಲಯ ಗಳಿಗೆ ಅಲ್ಲಿ ನಡೆಯುವ ನಿತ್ಯಗಟ್ಟಳೆಯ ಪೂಜಾಕೈಂಕರ್ಯ ಇತ್ಯಾದಿಗಳಿಗೆ ನೆರವಾಗಲು ನೀಡಿರುವಂತಹವೇ ಆಗಿವೆ. ಈ ನಾಡಿನ ತಮಿಳು ಶಾಸನಗಳಲ್ಲಿ ಅರ್ಚನಾವೃತ್ತಿ, ಭಟ್ಟವೃತ್ತಿ, ಪಳ್ಳಿಚ್ಚಂದ, ಮಡಪ್ಪುರಂ ಮುಂತಾದ ದಾನಪ್ರಕಾರಗಳು ಉಕ್ತವಾಗಿವೆ. ನಾಡಗೌಡರುಗಳಿಗೋ, ರಾಜರಿಗೋ ಧರ್ಮವಾಗಬೇಕೆಂದೋ, ಪುಣ್ಯವಾಗಬೇಕೆಂದೂ, ದೇವಾಲಯಗಳಿಗೆ ಅಮೃತಪಡಿ, ನೈವೇದ್ಯ, ದೀಪಾರಾಧನೆ, ಅಂಗರಂಗ ವೈಭೋಗ ಗಳಿಗಾಗಿ ಹೇರಳವಾಗಿ ದತ್ತಿಗಳನ್ನು ಬಿಟ್ಟಿರುವುದು ಕಂಡು ಬರುತ್ತದೆ. ತಿರುಪ್ರತಿಷ್ಠೆ, ತಿರುನಾಮ, ತಿರುನಾಳ್ ಅಮುಪ್ಪು, ತಿರುವಿಳಕ್ಕು, ಮುಂತಾದ ಅಂಶಗಳ ಉಲ್ಲೇಖಗಳು ತಮಿಳು ಶಾಸನಗಳಲ್ಲಿ ಕಂಡು ಬರುತ್ತವೆ.[59]

ನೆಲಮಂಗಲ ತಾಲೂಕಿನ ಪೆಸರುಘಟ್ಟ ಕ್ರಿ. ಶ. 1532ರ ಶಾಸನವೊಂದರಲ್ಲಿ ದೇವರ ಪ್ರತಿಷ್ಠೆ ಮಾಡಿದ ವಿವರವಿದೆ.[60]

ಮಾಗಡಿ ತಾಲೂಕಿನ ಕ್ರಿ. ಶ. 1667ರ ಶಾಸನವೊಂದು ಕಾಶಿಯಲ್ಲಿ ಮಠ ವನ್ನು ಕಟ್ಟಿಸಿ ಲಿಂಗಪ್ರತಿಷ್ಠೆ ಮಾಡಿಸಿದ ವಿವರವನ್ನು ನೀಡುತ್ತದೆ.[61] ದಾರಿಯ ಧರ್ಮಶಾಲಾ ಮಠ ಕಟ್ಟಿಸಿದ ಬಗ್ಗೆ ಶಾಸನವೊಂದು ಉಲ್ಲೇಖಿಸುತ್ತದೆ.[62]

**ದೇವಾಲಯಗಳ, ಮಠಗಳ ಧರ್ಮಾಧಿಕಾರಿಗಳು :** ದೇವಾಲಯದ ಅಧಿಕಾರಿಗಳಾಗಿ ಅನೇಕ ಮಠಪತಿಗಳ, ಸ್ಥಾನಿಕರ ಉಲ್ಲೇಖಗಳು ಈ ನಾಡಿನಲ್ಲಿ ಶಾಸನೋಕ್ತವಾಗಿವೆ. ಕೋವಿಲ್ ಕಾಣಿಯಾಳ್ ಇರಾಮ ಪಿರಾನ್ ಅಲ್ಲಾಳ ನಂಬಿಯಾರನ ಹೆಸರು ಕ್ರಿ.ಶ. 1258ರ ಶಾಸನವೊಂದರಲ್ಲಿ ಉಕ್ತವಾಗಿದೆ.[63] ಅಧಿಕಾರಿ ಶೆಲ್ಲಪಿಳ್ಳೈ ನಲನ್ದಿಗಳ್ ನಾರಾಯಣ ತಾತಾರ್ ಮುಂತಾದವರುಗಳ ಉಲ್ಲೇಖಗಳು ದೊಂಬಲೂರಿನ ಶಾಸನಗಳಲ್ಲಿ ಕಂಡುಬರುತ್ತವೆ.[64]

**ದೇವಾಲಯ ಶಿಲ್ಪ ಮತ್ತು ವಾಸ್ತು :** ದೇವನಹಳ್ಳಿ ತಾಲೂಕಿನ ಕ್ರಿ.ಶ.1300ರ ಶಾಸನಗಳಲ್ಲಿ ದೇವಾಲಯದ ಶಿಲ್ಪಕ್ಕೆ ಸಂಬಂಧಿಸಿದ ದುಗ್ಗೈಪಟ್ಟಿ (ದುರ್ಗಾದೇವಿಯ ಶಿಲ್ಪ) ಮತ್ತು ಪಿಡಾರಿಪಟ್ಟಿ (ಸಪ್ತ ಮಾತೃಕೆಯರ ಶಿಲ್ಪಗಳುಳ್ಳ ಪಟ್ಟಿ)ಗಳ ಉಲ್ಲೇಖಗಳು ಕಂಡು ಬಂದಿವೆ.[65] 'ಶಿಖರದ'ದ ಪ್ರಸ್ತಾಪವು ದೊಂಬಲೂರಿನ ಕ್ರಿ. ಶ. 1290 ರ ಶಾಸನದಲ್ಲಿ ಬಂದಿದೆ.[66]

**ಅಗ್ರಹಾರಗಳು :** ಈ ನಾಡಿನಲ್ಲಿ ಇರುಂಬಿಲಿಯೂರು (ಇಬ್ಬಲೂರು) > ವೀರಬಲ್ಲಾಳ ಚತುರ್ವೇದಿ ಮಂಗಲ.[67]......ಪಳ್ಳಿ > ಗಂಗನಾರಾಯಣ ಚತುರ್ವೇದಿ ಮಂಗಲ,[68] ಕುದಿರ್ಕಿಚ್ಚೈ > ರಾಮನಾಥದೇವ ಚತುರ್ವೇದಿ ಮಂಗಲ,[69] ಚಿಕ್ಕಜಾಲ > ವಿಷ್ಣುವರ್ಧನ ಚತುರ್ವೇದಿ ಮಂಗಲ[70] ಮುಂತಾದ ಚತುರ್ವೇದಿ ಮಂಗಲಗಳು ಅಂದರೆ ಅಗ್ರಹಾರಗಳು ಹೊಯ್ಸಳರ ಕಾಲದಲ್ಲಿ ಊರ್ಜಿತದಲ್ಲಿದ್ದ ಬಗ್ಗೆ ಶಾಸನಗಳು ಬೆಳಕು ಚೆಲ್ಲುತ್ತವೆ.

ಕ್ರಿ. ಶ. 1605ರಲ್ಲಿ ಇಮ್ಮಡಿ ಕೆಂಪೇಗೌಡನು ಮಂಡಿಸಾಗರವೆಂಬ ಹೆಸರಿದ್ದ ಗ್ರಾಮವನ್ನು ತನ್ನ ಹೆಸರಿನಲ್ಲಿ ಕೆಂಪಾಪುರವೆಂದು ಪ್ರತಿನಾಮವನ್ನು ನೀಡಿ, ಹಲಸೂರಿನ ಸೋಮೇಶ್ವರ ಸನ್ನಿಧಾನದಲ್ಲಿ ಹಲವು ಜನ ಬ್ರಾಹ್ಮಣರಿಗೆ ಅಗ್ರಹಾರವಾಗಿ ದಾನ ನೀಡಿದ ವಿವರ ಶಾಸನವೊಂದರಲ್ಲಿ ಬಂದಿದೆ.[71]

ಇದೇ ವರ್ಷ, ಅಯಿಂವರ ಕಂಡಪುರ (ಜಗಂಡಪುರ)ವನ್ನು ಅಗ್ರಹಾರವಾಗಿಸಿ ಬ್ರಾಹ್ಮಣರಿಗೆ ಇಮ್ಮಡಿ ಕೆಂಪೇಗೌಡನು ದಾನ ನೀಡಿರುವ ಉಲ್ಲೇಖ ದೊರೆಯುತ್ತದೆ.[72]

ನೆಲಮಂಗಲ ತಾಲೂಕಿನ ಶಾಸನವೊಂದರಲ್ಲಿ ಹೆಸರುಘಟ್ಟ > ಶಿವನಸಮುದ್ರವೆಂಬ ಸರ್ವಮಾನ್ಯ ಅಗ್ರಹಾರದ ಉಲ್ಲೇಖವಿದೆ.[73]

ದೇವನಹಳ್ಳಿ ತಾಲೂಕಿನ ಯಲಿತೊರೆಯನ್ನು ದೇವರಾಯಪುರವೆಂದು ಪ್ರತಿನಾಮವಿಟ್ಟು ಏಕಭೋಗ ಅಗ್ರಹಾರವಾಗಿ ದತ್ತಿ ನೀಡಿರುವುದು ಕಂಡುಬರುತ್ತದೆ.[74]

ಬೆಂಗಳೂರಿಗೆ ದೇವರಾಯಪಟ್ಟಣವೆಂದು ಪ್ರತಿನಾಮವಿದ್ದ ಬಗ್ಗೆ ಶಾಸನ

ವೊಂದು ತಿಳಿಸುತ್ತದೆಯಲ್ಲದೆ, ಬೆಂಗಳೂರಿನ ಪೌರೋಹಿತ್ಯವನ್ನು ಅನಂತಭಟ್ಟ ನೆಂಬವನಿಗೆ ಕೊಟ್ಟಿರುವುದು ಕಂಡು ಬರುತ್ತದೆ.[75]

**ಸುಂಕ / ತೆರಿಗೆಗಳು :** ಎಲಹಂಕ ನಾಡನ್ನು ಉಲ್ಲೇಖಿಸುವ ಶಾಸನಗಳಷ್ಟನ್ನೇ ಗಮನಿಸಿದರೂ ಅನೇಕ ತೆರನಾದ ತೆರಿಗೆ / ಸುಂಕಗಳ ಪರಿಚಯವಾಗುತ್ತದೆ. ಸಿದ್ಧಾಯ, ಕಾಣಿಕೆ, ಶಾರಿಗೈ ಉಟ್ಟಿಟ್ಟು, ಕೂಳಿಪೂರ್ಬ್ಬಾಯ, ಅಪೂರ್ಬ್ಬಾಯ, ದಂಡ, ಕಂಡಿಕೆ, ತಪ್ಪುಸುಂಕ, ಬಿಜಿಕುಳ, ಗ್ರಾಮುದಜಿಗೆ ಸುಂಕ ಇತ್ಯಾದಿ.[76]

**ಭೂಮಿಯ ಅಳತೆ :** ಭೂಮಿಯನ್ನು ಅಳತೆ ಮಾಡಲು 'ಮಾರು' ಎಂಬ ಮಾನವೊಂದನ್ನು ಬಳಸುತ್ತಿದ್ದ ಬಗ್ಗೆ ಕ್ರಿ.ಶ. 1533 ರ ಹೆಸರುಘಟ್ಟದ ಶಾಸನ ದಿಂದ ತಿಳಿದುಬರುತ್ತದೆ,[77]

**ಎಲ್ಲೆಗಲ್ಲುಗಳು :** ಭೂಮಿಯ ಎಲ್ಲೆಗಲ್ಲುಗಳಾಗಿ "ತ್ರಿಶೂಲದ ಕಲ್ಲು" ಎಂಬು ದನ್ನು ನೆಡುತ್ತಿದ್ದುದರ ವಿವರವು ಶಾಸನವೊಂದರಲ್ಲಿ ಪ್ರಯುಕ್ತವಾಗಿದೆ.[78]

---

## ಅಡಿಟಿಪ್ಪಣಿಗಳು

1. ಎಪಿಗ್ರಾಫಿಯಾ ಕರ್ನಾಟಿಕ, ಸಂಪುಟ ix (ರೈಸ್ ಆವೃತ್ತಿ), ದೊಡ್ಡ-ಬಳ್ಳಾಪುರ 31, ಕ್ರಿ. ಶ. 1267 (ಬೆಂಗಳೂರು ಸಪ್ಲಿಮೆಂಟರಿ ಸಂಪುಟದಲ್ಲಿ ತಿದ್ದುಪಾಡಾದ ಪಾಠದಂತೆ) ಮತ್ತು ಅದೇ. ಬೆಂಗಳೂರು, 134 ಕ್ರಿ.ಶ. 1308.
2. ಅದೇ. ಬೆಂಗಳೂರು 126.
3. ಅದೇ ದೇವನಹಳ್ಳಿ 60, ಕ್ರಿ. ಶ. 1329.
4. ಅದೇ 1, ಕ್ರಿ. ಶ. 1328.
5. ಅದೇ ಬೆಂಗಳೂರು 24, ಕ್ರಿ. ಶ. 1342.
6. ಅದೇ 129, ಕ್ರಿ. ಶ. 1342.
7. ಅದೇ 21, ಕ್ರಿ. ಶ. 1343.
8. ಅದೇ. ದೊಡ್ಡಬಳ್ಳಾಪುರ 14, 18, ಕ್ರಿ. ಶ. 1329 ?
9. ಅದೇ. ಬೆಂಗಳೂರು 31, ದೇವನಹಳ್ಳಿ 12.
10. ಅದೇ. ಮಾಗಡಿ 29, ಕ್ರಿ. ಶ. 1674.
11. ಅದೇ. ದೇವನಹಳ್ಳಿ. 75, ಕ್ರಿ. ಶ. 1046. ಎಲಪಕ್ಕದ ತಮಿಳೀಕರಣಗೊಂಡ ಸಾದೃಶ ರೂಪವೇ ಇಲೈಪಾಕ್ಕ. ಇದರಿಂದಾಗಿ ಮೂಲಾರ್ಥ ವನ್ನು ಕಳೆದುಕೊಂಡು ವಿಳ್ಯೆಯದ ಎಲೆ-ಅಡಿಕೆಗಳಿಗೆ ಸಂಬಂಧ ಕಲ್ಪಿಸುವಂತಾಗಿದೆ.

ವಾಸ್ತವವಾಗಿ ಇದಕ್ಕೂ ಮೂಲಾರ್ಥಕ್ಕೂ ಏನೂ ಸಂಬಂಧವಿಲ್ಲ.

12. ಸ್ಥಳನಾಮಗಳಲ್ಲಿ 'ಎಲವ' ಎಂಬ (specific) ವಿಶೇಷಾಂಶವನ್ನೊಳಗೊಂಡ ಕೆಲವು ಇತರ ಉಲ್ಲೇಖಗಳು :

(i) ಎಲವಕೂರು, ಎಲವಕ್ಕಯೂರು. ಎ.ಕ. IV (ಹೊಸ ಆವೃತ್ತಿ) ಚಾಮರಾಜನಗರ 78–82

(ii) ಯಲವನಹಳ್ಳಿ. ಅದೇ VI ಪಾಂಡವಪುರ 179.

(iii) ಯಲವಗೆರೆ ಅದೇ XII (ಮೈಸೂರು ಆವೃತ್ತಿ) ತುಮಕೂರು 50.

(iv) ಎಲವುರ್ ನಾಡು ಅದೇ IX ಬೆಂಗಳೂರು 51, 65 ; ನೆಲಮಂಗಲ 38 ಇತ್ಯಾದಿ.

ಹಕ್ಕ, ಹಂಕ, ವಂಕ ಮುಂತಾದ (generic) ಸಾಮಾನ್ಯಾಂಶಗಳನ್ನು ಅಂತ್ಯ ಅಥವಾ ಮಧ್ಯ ಪ್ರತ್ಯಯವಾಗಿ ಪಡೆದಿರುವ ಕೆಲವು ಇತರ ಉಲ್ಲೇಖಗಳು :

ಬರಕ್ಕ (ಬರ+ಹಕ್ಕ): ಕೊರಟಗೆರೆ ತಾಲೂಕು, ತುಮಕೂರು ಜಿಲ್ಲೆ (ಅಂತ್ಯಪ್ರತ್ಯಯ)

ಎಲವಕೂರು (ಎಲವ+ಹಕ್ಕ+ಊರು): ಎ.ಕ. IV ಚಾಮರಾಜನಗರ 78 (ಮಧ್ಯ ಪ್ರತ್ಯಯ)

ಕುರ್ವಂಕ (ಕುಱುವ+ಹಂಕ) ಅದೇ. VI ಶ್ರೀರಂಗಪಟ್ಟಣ 93 (ಅಂತ್ಯ ಪ್ರತ್ಯಯ)

13. ಎಪಿಗ್ರಾಫಿಯಾ ಕರ್ನಾಟಿಕ. ಸಂ. IX ದೇವನಹಳ್ಳಿ 75.

14. ಅದೇ. ಬೆಂಗಳೂರು 13.

15. ಅದೇ. ದೊಡ್ಡಬಳ್ಳಾಪುರ 31.

16. ಅದೇ. ಬೆಂಗಳೂರು 66, ಹೊಸಕೋಟೆ 75, ಇತ್ಯಾದಿ.

17. ಅದೇ. ಬೆಂಗಳೂರು 51 : ನೆಲಮಂಗಲ 38 : ಬೆಂಗಳೂರು 65.

18. ಅದೇ. ನೆಲಮಂಗಲ 31.

19. ಅದೇ. ಬೆಂಗಳೂರು 30.

20. ಅದೇ. 57.

21. ಅದೇ 138.

22. ಅದೇ 10, 6A, 51, 65, 23, 31, 24, 129, 21, 132, 139 ಇತ್ಯಾದಿ ಇತ್ಯಾದಿ.

23. ಅದೇ, ದೇವನಹಳ್ಳಿ 53, 24, 45, 1, 60, 72, 54, 3, 50, 58, 59, 12, 81, ಇತ್ಯಾದಿ, ಇತ್ಯಾದಿ.

24. ಅದೇ, ದೊಡ್ಡಬಳ್ಳಾಪುರ 14, 18, 31, 29, ಇತ್ಯಾದಿ.

25. ಅದೇ, ನೆಲಮಂಗಲ 31, 38 ಇತ್ಯಾದಿ.

26. ಅದೇ, ಹೊಸಕೋಟೆ 124.

27. ಅದೇ, ದೊಡ್ಡಬಳ್ಳಾಪುರ 31, 24, 18; ಬೆಂಗಳೂರು 51, 65, 23, 76, 134, 31, 129; ನೆಲಮಂಗಲ 38, ದೇವನಹಳ್ಳಿ 53, 60, 54, ಹೊಸಕೋಟೆ 124.

28. ಅದೇ, ದೇವನಹಳ್ಳಿ 50.

29. ಅದೇ. 50, 12; ಬೆಂಗಳೂರು 81, 67, 132, 139, 57, 138; ಹೊಸಕೋಟೆ 117.

30. ಕರ್ಲಮಂಗಲಂ ಶ್ರೀಕಂಠಯ್ಯ (ಸಂ) 'ಗೌಡಕುಲ ವಿಭೂಷಣ ಕೆಂಪೇಗೌಡ ಪ್ರಶಸ್ತಿ' ಮುನ್ನುಡಿ ಮತ್ತು ಪಿ. ಕೆ. ರಾಜಶೇಖರ ಮತ್ತು ಗೆಳೆಯರು (ಸಂ) ಮಾಗಡಿ ಕೆಂಪೇಗೌಡ (ಜಾನಪದ ಕಾವ್ಯ) ಪುಟ 3.

31. ಕರ್ಲಮಂಗಲಂ ಶ್ರೀಕಂಠಯ್ಯ, ಪೂರ್ವೋಕ್ತ ಗ್ರಂಥ ಮುನ್ನುಡಿ ಪು. 30.

32. ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ ೯. ದೊಡ್ಡಬಳ್ಳಾಪುರ 14 ಮತ್ತು ದೇವನಹಳ್ಳಿ 60,

33. ಅದೇ, ಹೊಸಕೋಟೆ 124.

34. ಅದೇ, ಬೆಂಗಳೂರು 31.

35. ಅದೇ, ದೇವನಹಳ್ಳಿ 12.

36. ಅದೇ, 72, 50; ಬೆಂಗಳೂರು 24, 129, 132, 139; ಹೊಸಕೋಟೆ 117.

37. ಅದೇ, ಬೆಂಗಳೂರು 6A.

38. ಅದೇ, 24.

39. ಅದೇ, 134.

40. ಅದೇ, 23

41. ಅದೇ. 134

42. ಅದೇ. ದೊಡ್ಡಬಳ್ಳಾಪುರ 14

43. ಅದೇ, ದೇವನಹಳ್ಳಿ 60.

44. ಅದೇ. ದೊಡ್ಡಬಳ್ಳಾಪುರ 18

45. ಅದೇ. ಹೊಸಕೋಟೆ 124.

46. ಅದೇ. ದೇವನಹಳ್ಳಿ 58

47. ಅದೇ. ದೇವನಹಳ್ಳಿ 60 ; ಹೊಸಕೋಟೆ 124, ಬೆಂಗಳೂರು 31, 24. 129, 21 ಇತ್ಯಾದಿ.

48. ಅದೇ. ದೇವನಹಳ್ಳಿ 50

49. ಅದೇ. ಬೆಂಗಳೂರು 81.

50. ಅದೇ. ದೇವನಹಳ್ಳಿ 60.

51. ಅದೇ. ಬೆಂಗಳೂರು 24.

52. ಅದೇ. 29.

53. ಅದೇ. ದೇವನಹಳ್ಳಿ 50.

54. ಅದೇ. ಹೊಸಕೋಟೆ 117.

55. ಕರ್ಲಮಂಗಲಂ ಶ್ರೀಕಂಠಯ್ಯ (ಸಂ) "ಗೌಡಕುಲ ವಿಭೂಷಣ ಕೆಂಪೇಗೌಡನ ಜಯಪ್ರಶಸ್ತಿ" ಮುನ್ನುಡಿ ಪುಟ 55, ಕರ್ಲಮಂಗಲಂ, 1961.

56. ಮ. ಬಾ. ಭೋಯಿ (ಅನು) ತಿರುಮಲಾರ್ಯ ವಿರಚಿತ ಚಿಕದೇವರಾಯ ವಂಶಾವಳಿ. ಬೆಂಗಳೂರು, 1981, ಪುಟ. 14.

57. ಅದೇ ಮತ್ತು ಪಿ. ಕೆ. ರಾಜಶೇಖರ ಮತ್ತು ಗೆಳೆಯರು (ಸಂ) ಮಾಗಡಿ ಕೆಂಪೇಗೌಡ (ಜಾನಪದ ಕಾವ್ಯ) ಗುಡ್ಡೇನಹಳ್ಳಿ 1975, ಪುಟ 3.

58. ಅನು : ನಿರಂಜನ—ಎನ್. ಸುಬ್ರಮಣಿಯನ್ ಅವರ ಸಂಗಮ್ ರಾಜಕೀಯ ಸಾಮಾಜಿಕ ವ್ಯವಸ್ಥೆ, ಮೈಸೂರು 1979, ಪುಟ 90.

59. ಎಪಿಗ್ರಾಫಿಯಾ ಕರ್ನಾಟಿಕ ಸಂ. ೯. ಬೆಂಗಳೂರು, 10, 11, 11, 13, 6A, 138, 57, 30 ; ದೇವನಹಳ್ಳಿ 58 ; ನೆಲಮಂಗಲ 31 ಇತ್ಯಾದಿ.

60. ಅದೇ. ನೆಲಮಂಗಲ 31.

61. ಅದೇ. ಮಾಗಡಿ 35.

62. ಅದೇ. ಬೆಂಗಳೂರು 2.

63. ಅದೇ. ಬೆಂಗಳೂರು 10.

64. ಅದೇ. 11.

65. ಅದೇ. ದೇವನಹಳ್ಳಿ 78, 80–ಕ್ರಿ. ಶ. 1300.

66. ಅದೇ. ಬೆಂಗಳೂರು 11

67. ಅದೇ 6A.

68. ಅದೇ. 23 ಕ್ರಿ. ಶ. 1305

69. ಅದೇ. ದೇವನಹಳ್ಳಿ 53. ಕ್ರಿ. ಶ. 1287

70. ಅದೇ. ದೇವನಹಳ್ಳಿ 53, ಕ್ರಿ.ಶ. 1412.

71. ಕರ್ಲಮಂಗಲಂ ಶ್ರೀಕಂಠಯ್ಯ ಪೂರ್ವೋಕ್ತ ಗ್ರಂಥ ಮುನ್ನುಡಿ ಪುಟ 18

72. ಅದೇ.

73. ಎಪಿಗ್ರಾಫಿಯಾ ಕರ್ನಾಟಿಕ ಸಂ. ೯ ನೆಲಮಂಗಲ 31

74. ಅದೇ. ದೇವನಹಳ್ಳಿ 81

75. ಕರ್ಲಮಂಗಲಂ ಶ್ರೀಕಂಠಯ್ಯ–ಪೂರ್ವೋಕ್ತ ಗ್ರಂಥ. ಪುಟ 29

76. ಎಪಿಗ್ರಾಫಿಯಾ ಕರ್ನಾಟಿಕ ಸಂ. ೯. ದೇವನಹಳ್ಳಿ, 58 ಕ್ರಿ.ಶ. 1382 ಮತ್ತು ದೊಡ್ಡಬಳ್ಳಾಪುರ 31–ಕ್ರಿ.ಶ. 126 /

77. ಅದೇ. ನೆಲಮಂಗಲ 31

18. ಅದೇ.

---



# ಸುಬ್ರಹ್ಮಣ್ಯನ ಮೇಲೆ ಲಕ್ಷ್ಮೀಶನ ಪ್ರಭಾವ

—ಎಚ್. ಜಿ. ಶ್ರೀಧರ

ದೇಸಿ ಸಂಪ್ರದಾಯಕ್ಕೆ ಸೇರಿದ ಷಟ್ಪದಿಯನ್ನು ಅಭಿವ್ಯಕ್ತಿಯ ಮಾಧ್ಯಮಕ್ಕೆ ಬಳಸಿ ಕಾವ್ಯ ರಚಿಸಿದ ಕವಿಗಳಲ್ಲಿ ರಾಘವಾಂಕ ಮೊದಲಿಗ. ಈತನ ಸಮಕಾಲೀನನೆಂದು ಭಾವಿಸಲಾಗಿರುವ ಪೋಲಾಳ್ವ ದಂಡನಾಥನು ಹರಿಚಾರಿತ್ರವನ್ನು ಷಟ್ಪದಿಯಲ್ಲಿ ಬರೆದನೆಂದು ದಾವಣಗೆರೆಯ (ಕ್ರಿ.ಶ. 1224) 25ನೇ ಶಾಸನದಲ್ಲಿ ಹೇಳಿದೆ. ಹರಿಚಾರಿತ್ರ ಉಪಲಬ್ಧವಾಗದ ಕಾರಣ ಸದ್ಯಕ್ಕೆ ಷಟ್ಪದಿ ಮಾರ್ಗ ಪ್ರವರ್ತಕನೆಂಬ ಪಟ್ಟ ರಾಘವಾಂಕನಿಗೆ ದಕ್ಕಿದೆ. ಕಥೆ ಹೇಳುವ ರೀತಿಯಲ್ಲಿ ಹೊಸತನ, ದೇಸಿಯ ಮಟ್ಟವನ್ನು ಅಭಿವ್ಯಕ್ತಿಗೆ ಬಳಸಿದ್ದು ಆತನ ಪ್ರಯೋಗಶೀಲ ಮನೋಧರ್ಮಕ್ಕೆ ಸಾಕ್ಷಿ. ಭಾಮಿನಿ ಕುಮಾರವ್ಯಾಸನಲ್ಲಿ ಉತ್ತುಂಗತೆಗೇರಿದರೆ ವಾರ್ಧಕ ಮೊದಲು ರಾಘವಾಂಕನಲ್ಲೇ ಪರಿಪೂರ್ಣ ಯಶಸ್ಸು ಸಾಧಿಸಿತು. ಅಲ್ಲಿಂದೀಚೆಗೆ ಲಕ್ಷ್ಮೀಶ, ಲಕ್ಕಣ್ಣ, ದಂಡೇಶ, ಗೋಪಕವಿ, ಮುಂತಾದವರು ವಾರ್ಧಕ ಷಟ್ಪದಿಯಲ್ಲಿ ಕಾವ್ಯ ರಚಿಸಿದ ಹೆಗ್ಗಳಿಕೆಗೆ ಪಾತ್ರರು. ಸುಬ್ರಹ್ಮಣ್ಯ ಕವಿಯ "ಶರಾವತಿ ಮಹಾತ್ಮೆ" ಸಹ ಇದೇ ಬಂಧದಲ್ಲಿ ರಚಿತವಾದ ಮತ್ತೊಂದು ಕಾವ್ಯ.

'ಶರಾವತಿ ಮಹಾತ್ಮೆ' ಮೊದಲು ಪ್ರಕಟವಾದದ್ದು 1979ರಲ್ಲಿ. ಕೃತಿಯ ಆರಂಭದ ದೀರ್ಘವಾದ ಪರಿಚಯಾತ್ಮಕ ವಿವರಣೆಯನ್ನು ಬಿಟ್ಟರೆ ಈ ಕಾವ್ಯದ ಬಗ್ಗೆ ಸರಿಯಾದ ಚಿಂತನೆ ಇದುವರೆಗೂ ನಡೆದಂತಿಲ್ಲ. ಕೃತಿ ಪರಿಚಯಿಸುವ ಲೇಖಕರ ವಿವರಣೆ ಸಮಗ್ರವಾಗಿ ಸುಬ್ರಹ್ಮಣ್ಯನ ಶಕ್ತಿಯನ್ನು ಒರೆಹಚ್ಚದು. ಕಾವ್ಯ ಸೃಷ್ಟಿಯ ಹಿನ್ನೆಲೆಯಲ್ಲಿನ ಪ್ರೇರಣೆ, ಪ್ರಭಾವವನ್ನು ಗುರುತಿಸದೆ ಪ್ರಸ್ತಾವನೆ ಮಾತ್ರ ಸೀಮಿತವಾಗಿದೆ. ಕಾವ್ಯದಲ್ಲಿ ಹಲವೆಡೆ ಛಂದೋಭಂಗವಿದ್ದರೂ ಸಂಪಾದಕರು ಅದನತ್ತ ಗಮನ ಹರಿಸಿದಂತಿಲ್ಲ. ಒಟ್ಟಿನಲ್ಲಿ ನನಗೆ ಮುಖ್ಯವೆನಿಸಿದ, ಸಂಪಾದಕರು ದಾಕ್ಷಿಣ್ಯದಿಂದ ಗುರುತಿಸದೇ ಬಿಟ್ಟ ಕೆಲವಂಶಗಳನ್ನು ಬೆಳಕಿಗೆ ತರುವ ಯತ್ನವಿಲ್ಲಿದೆ.

"ನರಹರಿಯ ಚರಣ ಸೇವಾನಿರತ ಕಾಳಿಕಾ
ಪುರದ ರಾಮಾಚಾರ್ಯರಣುಗ ಸುಬ್ರಹ್ಮಣ್ಯ
ನೊರೆದ ಚರಿತೆ" (ಶ.ಮ. 1-6)

ಇದು ಕವಿ ನೀಡಿದ ವೈಯಕ್ತಿಕ ವಿವರ. ಇನ್ನೆಲ್ಲೂ ಆತ ತನ್ನ ಸ್ವಂತ ವಿಷಯವನ್ನು ಪ್ರಸ್ತಾಪಿಸುವುದಿಲ್ಲ. ಪೂರ್ವದ ಯಾವ ಕವಿಯನ್ನೂ ಸ್ಮರಿಸದಿರುವುದು, ತನ್ನ ಗ್ರಂಥ ರಚನೆಯ ಕಾಲವನ್ನು ಉಲ್ಲೇಖಿಸದಿರುವುದು, ಸುಬ್ರಹ್ಮಣ್ಯನ ಕಾಲ ವಿಚಾರ

ಸಂದಿಗ್ಧವಾಗಲು ಮುಖ್ಯ ಕಾರಣ. ವಸ್ತು, ಶೈಲಿಯಲ್ಲಿ ಲಕ್ಷ್ಮೀಶನಿಂದ ಪ್ರಭಾವಿತನಾಗಿದ್ದರೂ ಆತನ ಹೆಸರನ್ನು ಹೇಳುವುದಿಲ್ಲ! ಲಕ್ಷ್ಮೀಶನಿಗಿಂತ ಈಚಿನವನೆನ್ನುವುದು ಕಾವ್ಯವನ್ನೋದಿದಾಕ್ಷಣ ಅರಿವಿಗೆ ಬರುವ ಮೊದಲ ಅಂಶ. ಸು. ಕ್ರಿ.ಶ. 1550 ಲಕ್ಷ್ಮೀಶನ ಕಾಲ ಎಂದು ಸಾಮಾನ್ಯವಾಗಿ ಸ್ವೀಕರಿಸಲಾಗಿದೆ. ಕವಿ ಮೊದಲ ಸಂಧಿಯ 32ನೇ ಪದ್ಯದಲ್ಲಿ :

ಅತ್ತಲಾ ಶರಾವತಿಯುತ್ಸವದಿಂ ವೇಣು
ಪತ್ತನವ ಸುತ್ತಿಕೊಂಡರ್ಥಿಯಿಂ ನಲಿದಾಡು
ತುತ್ತಮದ ನದಿಗಳಂ ಪತ್ತೆರಡು ಕೂಡಿಕೊಂಡುತ್ತರಕೆ ಭಾರಂಗಿಯು ॥

ಎಂದಿದೆ. ಇಲ್ಲಿ 'ವೇಣುಪತ್ತನ' ಪದ ಕಾಲ ನಿರ್ಧಾರದ ದೃಷ್ಟಿಯಿಂದ ಮುಖ್ಯ. ಇದು ಒಂದು ಹಳ್ಳಿಯಾಗಿತ್ತು. ಕ್ರಿ.ಶ. 1639ರಲ್ಲಿ ವೀರಭದ್ರನಾಯಕ ತನ್ನ ರಾಜಧಾನಿಯನ್ನು ಇಕ್ಕೇರಿಯಿಂದ ವೇಣುಪುರಕ್ಕೆ ವರ್ಗಾಯಿಸಿದನು. ರಾಜಬೀದಿ, ಕೋಟೆ ಕೊತ್ತಲ, ಸುಂದರವಾದ ಅರಮನೆಯನ್ನು ಈ ಸಂದರ್ಭದಲ್ಲಿ ಕಟ್ಟಿಸಿದನೆಂದು 'ಕೆಳದಿನೃಪವಿಜಯ' ದಾಖಲಿಸುತ್ತದೆ. ರಾಜಕೀಯವಾಗಿ ಪ್ರಮುಖ ಸ್ಥಾನವನ್ನು ಪಡೆದನಂತರ ಈ ಹಳ್ಳಿ 'ವೇಣುಪತ್ತನ'ವಾಯಿತು. ಕವಿ ವೈಭವದಿಂದ ಕೂಡಿದ್ದ ಈ ನಗರವನ್ನು ಉಲ್ಲೇಖಿಸುವುದರಿಂದ ಈತನ ಕಾಲ ಕ್ರಿ.ಶ. 1639ರ ಅನಂತರ ಎಂದು ಊಹಿಸಬಹುದು. ಹೀಗಾಗಿ ಕ್ರಿ.ಶ. ಸು. 1650ರ ಅನಂತರ ಈ ಕೃತಿ ರಚನೆಯಾಗಿರಬೇಕು.

ಆತನೇ ಹೇಳಿದಂತೆ, ಕವಿಯ ಊರು ಕಾಳಿಕಾಪುರ. ತಂದೆ ರಾಮಾಚಾರ್ಯ. ಆರಾಧ್ಯದೈವ ಬಿದರೂರಿನ ನರಸಿಂಹಸ್ವಾಮಿ. ಪ್ರತಿ ಸಂಧಿಯ ಕೊನೆಯಲ್ಲಿ "ಬಿದರೂರ ಪುರದೊಳಗಿರುವ ನಾರಸಿಂಹಸ್ವಾಮಿ", "ವೇಣುಪುರದೊಡೆಯ ವರಲಕ್ಷ್ಮೀ ನರಸಿಂಹ", "ಲಕ್ಷ್ಮೀಶ", "ನರಸಿಂಹ" ಎಂದು ಇಷ್ಟದೇವತೆಯನ್ನು ಸ್ಮರಿಸುವನು. ಕಾವ್ಯದಲ್ಲಿ ಶಿವನು ಶರಾವತಿ ತೀರಕ್ಕೆ ಬಂದು ನೆಲಸಿದ ಕಥೆಯೂ ಇದೆ. ಹೀಗಾಗಿ "ಶರಾವತಿ ಮಹಾತ್ಮೆ"ಯನ್ನು ಆದ್ಯಂತವಾಗಿ ಗಮನಿಸಿದರೆ ಹರಿಹರರನ್ನು ಸಮಾನವಾಗಿ ಗೌರವಿಸುವ ಉದಾರ ಮನೋಭಾವದ ಭಾಗವತ ಧರ್ಮಕ್ಕೆ ಸೇರಿದ ಕವಿಯೆಂದು ಸ್ಥೂಲವಾಗಿ ಸ್ವೀಕರಿಸಬಹುದು. ಶರಾವತಿಯ ಇರ್ಕಡೆಯಲ್ಲಿ ಹರಿಹರರಿಬ್ಬರೂ ನೆಲಸಿ ಈ ಕ್ಷೇತ್ರವನ್ನು ಪಾವನಗೊಳಿಸಿದರೆನ್ನುವಲ್ಲಿ ಅವನ ಭಾಗವತ ಮನೋಧರ್ಮ ನಿಚ್ಚಳವಾಗಿದೆ.

ಭಕ್ತಿಯಿಂದೀ ಕೃತಿಯ ಹೇಳಿಕೇಳುವರಿಂಗೆ
ಪುತ್ರ ಮಿತ್ರ ಕಳತ್ರ ಮೊದಲಾದ ಸಂಪದವ
ನಿತ್ಯ ಪರದಲಿ ಪರಮಪದವೀಯುವನು ವೇಣುಪತ್ತನದ ನರಸಿಂಹನು ॥

ಎಂದು ಸಹೃದಯ ಬಂಧುಗಳಿಗೆ ಕಾವ್ಯಪ್ರಯೋಜನವನ್ನು ಹೇಳಿರುವನು.

ನರಸಿಂಹನ ಸ್ತುತಿಯ ಮೂಲಕ ಪರಮ ಪದವಿ ಗಳಿಸುವ ಉದ್ದೇಶ ಕವಿಯದು. ಹೀಗಾಗಿ ಕಾವ್ಯದಲ್ಲಿ ಆದ್ಯಂತವಾಗಿ ಭಕ್ತಿರಸದ ಗಂಗಾಸ್ರೋತ ಹರಿದಿದೆ.

'ಶರಾವತಿ ಮಹಾತ್ಮೆ'ಗೆ ಸ್ಕಾಂದ ಪುರಾಣದ ತುಂಗಾ ಸಂಹಿತೆ ಮತ್ತು ಲಕ್ಷ್ಮೀಶನ ಜೈಮಿನಿ ಭಾರತ ಮೂಲ ಆಕರ. ವೈದಿಕ ಮನೆತನದಲ್ಲಿ ಕವಿ ಹುಟ್ಟಿದವನಾದ್ದರಿಂದ ವ್ಯಾಕರಣ, ಲಕ್ಷಣ, ಸಂಸ್ಕೃತದ ಪರಿಚಯವಿತ್ತೆಂಬಲ್ಲಿ ಸಂಶಯವಿಲ್ಲ.

ವಿಘ್ನೇಶ, ಸರಸ್ವತಿ, ನರಸಿಂಹಸ್ವಾಮಿಯ ಪ್ರಾರ್ಥನಾ ಪದ್ಯಗಳೊಂದಿಗೆ ಕವಿ ಸಾಂಪ್ರದಾಯಿಕ ರೀತಿಯಲ್ಲಿ ಕಾವ್ಯವಾರಂಭಿಸುವನು :

ಧಾರುಣಿಯೊಳಧಿಕವಾಗಿರುವ ವೇಣ್ಪುರದೊಡೆಯ
ನಾರಸಿಂಹಸ್ವಾಮಿ ಹೃದಯಕಮಲದೊಳಿದ್ದು
ಪ್ರೇರಿಸಿದ ರೀತಿಯಿಂ ತರಳ ನುಡಿಯಿಂದಲೀ ಸಾರವಂ ವರ್ಣಿಸುವೆನು ॥

ಎಂದು ಕವಿ ವಿನಯದಿಂದ ನುಡಿಯುವನು. ಕಾವ್ಯಸೃಷ್ಟಿಯ ಹಿನ್ನೆಲೆಯಲ್ಲಿನ ದೈವೀಶಕ್ತಿಯನ್ನು ಲಕ್ಷ್ಮೀಶನಂತೆ ಈತನೂ ಒಪ್ಪಿಕೊಳ್ಳುವನು.

ಶೌನಕಾದಿಗಳ ಪ್ರಾರ್ಥನೆಯಂತೆ ಸೂತಮುನಿಗಳು ಅವರಿಗೆ ಕಾವೇರಿ ಮುಂತಾದ ಪುಣ್ಯನದಿಗಳ ಕಥೆಯನ್ನು ಹೇಳುತ್ತಿರುವ ಸಂದರ್ಭದಲ್ಲಿ "ಶರಾವತಿ ಮಹಾತ್ಮೆ"ಯನ್ನು ಚಿತ್ರಿಸುವರು. ಜೈಮಿನಿಯಲ್ಲಿ ಜನಮೇಜಯನು ಪ್ರಾರ್ಥಿಸಿದಂತೆ! ಮುಂದಿನ ಎಲ್ಲ ಕಥೆಗಳು ಶೌನಕಾದಿಗಳ ಬೇಡಿಕೆಯ ಮೇರೆಗೆ ಅನಾವರಣಗೊಳ್ಳುತ್ತವೆ. ವಾರ್ಧಕದಲ್ಲಿ ರಚಿತವಾದ ಜೈಮಿನಿಭಾರತ ಹಾಗೂ ಶರಾವತಿ ಮಹಾತ್ಮೆ ಆರಂಭವಾಗುವ ರೀತಿಯಲ್ಲಿಯೇ ಸಾಮ್ಯತೆಯಿದೆ. "ಕೇಳೆಲೆ ನೃಪಾಲ ಪಾಂಡವರ ಕಥೆಯಿದು (ಜೈ.ಭಾ. 2–4) ಎಂದು ಲಕ್ಷ್ಮೀಶ ಆರಂಭಿಸಿದರೆ ಸುಬ್ರಹ್ಮಣ್ಯ "ಋಷಿಗಳಿರ ಕೇಳಿರೈ ಸಹ್ಯಾದ್ರಿಯೊತ್ತಿನಲಿ" (1–12) ಎಂದು ಕಥೆಗೆ ಪೀಠಿಕೆ ಹಾಕುವನು.

ರಾಮಾಯಣದ ಕಥೆ ಆರಂಭವಾಗಿ ಶರವೇಗದಲ್ಲಿ ಮುಂದುವರಿಯುವುದು. ಈ ಸಂದರ್ಭದಲ್ಲಿ ಬರುವ ಸುಬ್ರಹ್ಮಣ್ಯನ ಪದ್ಯವಿದು—

ದಂಡಕಾರಣ್ಯದಲಿ ಶೂರ್ಪನಖಿ ಬರೆ ಮೂಗ
ಖಂಡಿಸುತ ಖರದೂಷಣಾದಿಗಳ ಶಿರಗಳಂ
ಚೆಂಡಾಡಿ ಕನಕ ಮೃಗ ವ್ಯಾಜದಿಂ ಹರಿಯುಮಂ ಕೊಂಡುಬಹೆನೆಂದು ಪೋಗೆ ॥
ಪುಂಡರೀಕಾಂಬಕನ ಬಳಿಗೆ ಲಕ್ಷ್ಮಣ ತೆರಳೆ
ಕಂಡು ರಾವಣನು ಸಂನ್ಯಾಸಿ ವೇಷದಿ ಕದ್ದು
ಕೊಂಡೊಯ್ಯೆ ಜಾನಕಿಯನೆಸುತಿರ್ಪರಂ ಬಂದು ಕಾದೈ ಖಗಪತಿಯುಂ ॥

(ಶ.ಮ. 1–17)

ಈ ಪದ್ಯಕ್ಕೆ ಲಕ್ಷ್ಮೀಶನ 'ದಂಡಕಾರಣ್ಯದೊಳಿರಲ್ಕೆ...' (ಜೈ.ಭಾ. 17–4) ಪದ್ಯ ಮೂಲವಾಗಿದೆ. ಖಗಪತಿಯನ್ನು ಕಂಡು ಮುನ್ನಡೆದರೆಂದು ಲಕ್ಷ್ಮೀಶ ಬರೆದರೆ ಈತನಲ್ಲಿ ಖಗಪತಿಯನ್ನು ಕಾಣುವಲ್ಲಿವರೆಗೆ ವಿವರವಿದೆ. ಲಕ್ಷ್ಮೀಶನಂತೆ ಸಂಗ್ರಹದತ್ತ ಹೆಚ್ಚು ಗಮನ ಕವಿಗಿದೆಯೇ ಹೊರತು ಕಾವ್ಯಾತ್ಮಕ ಚಿತ್ರ ಬಿಡಿಸುವಲ್ಲಿಲ್ಲ.

ಶಕುನಿ ಚೀತ್ಕಾರ ಘೋಷಣಮಯಂ ತೃಣಮಯಂ (19–8)

ಎಂಬಂತಹ ಲಕ್ಷ್ಮೀಶನ ಪದ್ಯಗಳು ಸುಬ್ರಹ್ಮಣ್ಯನಲ್ಲಿ :

ಅಂಬುಜಗಳೊಪ್ಪಿರುವ ಕೊಣಗಳಿಂ ತೃಣಗಳಿಂ

ಎಂಬ ರೀತಿಯ ಷಟ್ಪದಿಯ ಸೃಷ್ಟಿಗೆ ಕಾರಣವಾಗಿದೆ. ಲಕ್ಷ್ಮೀಶನಂತೆ (ಜೈ.ಭಾ. 11-36) ಈತನೂ ಮೈಮರೆತು ಸಮಯ ಸಿಕ್ಕಲ್ಲಿ ಧಾರಾಳವಾಗಿ ಕೃಷ್ಣಸ್ತುತಿಯ (ಶ.ಮು. 5–16) ಮಳೆಗರೆಯಬಲ್ಲ. ಅವಕಾಶ ಸಿಕ್ಕರೆ "ಈಶಾಯ ಗಿರಿವರ ಸುತೇಶಾಯ ತರಣಿ ಸಂಕಾಶಾಯ ಭುಜಗಪತಿ ಭೂಷಾಯ" ಎಂದು ಈಶನನ್ನು ತದೇಕಚಿತ್ತದಿಂದ ಭಕ್ತಿಪೂರಿತವಾಗಿ ಸ್ತುತಿಸುವ ಧಾರಾಳ ಮನಸ್ಸು ಕವಿಯದು.

ಕೆಲವೆಡೆ ಲಕ್ಷ್ಮೀಶನಿಂದ ಭಾವವನ್ನು ಸ್ವೀಕರಿಸಿದರೂ ಕವಿ ಅದನ್ನು ಇನ್ನಷ್ಟು ವಿಸ್ತರಿಸಬಲ್ಲ. ಸೊಗಸಾದ ಚಿತ್ರವನ್ನು ಕೊರೆಯಬಲ್ಲ ;

"ಪೃಥಿವಿಜೆಯನರಸಲ್ಕೆ ವೀರ ಹನುಮಂತನಂ ಕಳಿಪಿದಂ ಕಾಕುತ್ಸ್ಥನು" ಎಂಬ ಲಕ್ಷ್ಮೀಶನ ಮಾತು ಸುಬ್ರಹ್ಮಣ್ಯನಲ್ಲಿ ಇಡೀ ಪದ್ಯವೊಂದರ ತುಂಬ ಹರಡಿಕೊಳ್ಳುತ್ತದೆ ;

ಮುದ್ದುಹನುಮನ ಕರೆದು ಬುದ್ಧಿಯಂ ಪೇಳಿದ ಸ
ಮುದ್ರವಂ ದಾಟಿ ನೀ ಸದ್ದುಮಾಡದೆ ದೇವಿ
ಯಿದ್ದ ಗೊತ್ತನು ತಿಳಿದು ಮುದ್ರೆಯುಂಗುರವಿತ್ತು ಸದ್ಯ ಬಹೆನೆನ್ನು ನಾನು ॥

ಕ್ಷುದ್ರ ದನುಜರಿಗೆಲ್ಲ ಮದ್ದರೆದು ಕಾರ್ಯವನು
ಗೆದ್ದು ಸೀತೆಯು ಕೈಯೊಳಿದ್ದ ಕುರುಹನು ತಂದು
ಯೆದ್ದು ಬಂದೆನಗಾದ ಸುದ್ದಿಯರುಹೆಂದು ಕಪಿರುದ್ರನಂ ಬೀಳ್ಕೊಟ್ಟನು ॥

(ಶ.ಮು. 2–5)

ಎಂಬಲ್ಲಿ ಹೊಸ ಅಂಶವನ್ನು ಸೇರಿಸಿದ್ದು ಕಂಡುಬರುತ್ತದೆ. ಆದರೆ ಹನುಮನಿಗೂ ರಕ್ಕಸರಿಗೂ ಯುದ್ಧವಾಗುವ ಸಂಗತಿ, ಹನುಮ ಸೀತೆಯಿಂದ ಚೂಡಾಮಣಿಯನ್ನು ತರುವ ವಿಷಯ, ಕವಿಗೆ ಗೊತ್ತಿದ್ದ ಮಾತ್ರಕ್ಕೆ ಭವಿಷ್ಯದಲ್ಲಿ ಇನ್ನೂ ಆಗಬಹುದಾದ ಘಟನೆಯನ್ನು ಸೂಚಿಸುವುದು ಆಭಾಸದ ವಿಷಯ. ಇದರ ಮುಂದಿನ ಪದ್ಯ ಬಹುತೇಕ ಲಕ್ಷ್ಮೀಶನ (ಜೈ.ಭಾ. 18-6) ಅನುಕರಣೆ :

ಧೀಂಕಿಟ್ಟು ಶರಧಿಯಂ ದಾಂಟಿ ಪುರವನು ಕಾಯ್ದು
ಲೆಂಕಿಣಿಯ ಕೊಂದು ಸೀತೆಯ ಕಂಡು ಶ್ರೀರಾಮ
ನಂಕಿತದ ಮುದ್ರಿಕೆಯನಿತ್ತು ವನವಂ ತರಿದು ಟೊಂಕವಂ ಮುರಿದಾಕ್ಷಣ ॥

ಅಂಕೆ ಮಾಡಲು ಸಭೆಗೆ ತಂದು ಬಾಲದ ತುದಿಗೆ
ಬೆಂಕಿಯನ್ನಿಡಲು ಪುರವನು ಸುಟ್ಟು ರಾವಣನ
ಬಿಂಕವಂ ಮುರಿದು ನಿಃಶಂಕ ಬಂದನು ತಿರುಗ ಶಂಕರ ಪ್ರಿಯನ ಬಳಿಗೆ ॥
(ಶ.ಮ. 2-9)

ಇಲ್ಲಿ 'ತಿರುಗ'* ಪದವನ್ನು ತಿರುಗಿ, ಪುನಃ, ಎಂಬರ್ಥದಲ್ಲಿ ಬಳಸಲಾಗಿದೆ. ಕೆಲವೊಮ್ಮೆ ಹೀಗೆ ಬಳಸುವ ರೂಢಿ ಈಗಲೂ ಇದೆ. ಅಭಿವ್ಯಕ್ತಿಯಲ್ಲಿ ಇಬ್ಬರಿಗೂ ಯಾವ ವ್ಯತ್ಯಾಸವೂ ಇಲ್ಲ. ಲಕ್ಷ್ಮೀಶ ಪ್ರಸ್ತಾವಿಸಿದ ಇಂದ್ರಜಿತುವಿನ ವಿಷಯವನ್ನು ಸುಬ್ರಹ್ಮಣ್ಯನು ಬಿಟ್ಟಿರುವನು. ಲಕ್ಷ್ಮೀಶನಲ್ಲಿ ರಾವಣನನ್ನು ಗೆದ್ದ ರಾಮ ನೇರವಾಗಿ ಅಯೋಧ್ಯೆಗೆ ತೆರಳಿದರೆ ಇಲ್ಲಿ ಶರಾವತಿ ತೀರಕ್ಕೆ ಬಂದು ಹನುಮಂತನು ಕಾಶಿಯಿಂದ ತಂದ ಲಿಂಗವನ್ನು ಪ್ರತಿಷ್ಠಾಪಿಸಿ ರಾವಣವಧ ದೋಷವನ್ನು ಕಳೆದುಕೊಳ್ಳುವ ಮಹತ್ಕಾರ್ಯ ಮಾಡುವನು. ಭರತನನ್ನು ಕಾಣುವ ಅವಸರದಲ್ಲಿದ್ದ ರಾಮ ಈ ಕಾರ್ಯಕ್ಕೆ ಸಮಯವನ್ನು ವ್ಯಯಮಾಡಿದ್ದು ಹೊಸ ವಿಷಯ. ನದಿಯ ಪವಿತ್ರತೆಯನ್ನು ಹೆಚ್ಚಿಸಲು ಕವಿ ಮಾಡಿದ ಪರಿವರ್ತನೆಯಿದು. ಕಥೆ ಮುಗಿಯುವಷ್ಟರಲ್ಲಿ ಮುನಿಗಳ ಅಪೇಕ್ಷೆಯಂತೆ ಇನ್ನೊಂದು ಕಥೆ ಆರಂಭವಾಗುವುದು. ವೈಕುಂಠಾಧಿಪತಿ ಧರೆಗಿಳಿಯುವನು. ಶ್ರೀವಿಷ್ಣು ಲಕ್ಷ್ಮಿಯೊಂದಿಗೆ ಪುಣ್ಯಕ್ಷೇತ್ರಗಳನ್ನೆಲ್ಲ ಸಂದರ್ಶಿಸುತ್ತ ಶರಾವತಿಯ ತೀರಕ್ಕೆ ಬರುವನು. ಅಲ್ಲಿನ ತೀರ ಪ್ರದೇಶ ಸುಖ ಸಮೃದ್ಧಿಯ ನೆಲೆಬೀಡು. ಭಕ್ತರ ಆಲಯ!

ಎಲ್ಲಿಯುಂ ಮೆರೆವಗ್ರಹಾರಮಯ ಸಾರಮಯ
ಎಲ್ಲಿಯುಂ ಶಾಸ್ತ್ರ ಸಂವಾದಮಯ ವೇದಮಯ (ಶ.ಮ. 2-24)

ಆಗಿ ಶೋಭಿಸುತ್ತಿತ್ತು. ಇದರ ಲಯ ವಿನ್ಯಾಸವನ್ನು ಕವಿ ಲಕ್ಷ್ಮೀಶನಿಂದ (ಜೈ.ಭಾ. 3-2) ಸ್ವೀಕರಿಸಿರುವನು. ಶರಾವತಿ ಹರಿದುಬರುವ ವೈಭವವನ್ನು ವರ್ಣಿಸುವಾಗಲೂ ಕವಿ ಲಕ್ಷ್ಮೀಶನಿಂದ ಉಪಕೃತ. 9-2 ಹಾಗೂ 19-5 ಸುಬ್ರಹ್ಮಣ್ಯನಿಗೆ ಮೂಲ ಸಾಮಗ್ರಿಯನ್ನು ಒದಗಿಸಿದಂತಿದೆ. "ತೆರತೆರದ ಕಲ್ಲೋಲ ಮಾಲೆಗಳ ಲೀಲೆಗಳ" ಎಂಬ ಲಕ್ಷ್ಮೀಶನ ಪದ ಸಂಪತ್ತು "ಕಳಕಳಿಪ ಕಲ್ಲೋಲ ಮಾಲೆಯಿಂ ಲೀಲೆಯಿಂ" ಎಂದು ಸುಬ್ರಹ್ಮಣ್ಯನ ಸೊತ್ತಾಗಿ ಬಳಕೆಯಾಗಿದೆ. "ಕಾಂತೆ ಕೇಳಿಕ್ಷ್ವಾಕು ವಂಶಮೆನ್ನಲ್ಲಿ" (ಜೈ.ಭಾ. 18-16) ಎಂಬುದು "ಕಾಂತೆ ಜಾನಕಿ ಕೇಳು ಯೆನ್ನಿಂದ

---

* ಹವ್ಯಕ ಉಪಭಾಷೆಯಲ್ಲಿ 'ತಿರುಗ' ಎಂಬುದಕ್ಕೆ ತಿರುಗಿ (ಪುನಃ) ಎಂಬ ಅರ್ಥವಿದೆ. (ಸಂ)

ಮೇಲಿನ್ನು" (ಶ.ಮ. 3-9) ಎಂದಾಗಿದೆ. ರಾಮ ಮಕ್ಕಳಿಲ್ಲದ ಚಿಂತೆಯಲ್ಲಿ ಮುಳುಗಿದ್ದಾಗ "ಇಂತು ಸುತರಿಲ್ಲದಾಸರೋಳ್ವರ್ಗಳಿರ್ವರುಂ...." (ಜೈ.ಭಾ. 18-22) ಎಂದು ಬರೆದ ಪದ್ಯವನ್ನು ಸುಬ್ರಹ್ಮಣ್ಯ ಬಹುತೇಕ ಅದೇ ರೀತಿಯಲ್ಲಿ ಸ್ವೀಕರಿಸುವನು :

> ಇಂತು ಸುತರಿಲ್ಲವೆಂದಿರ್ವರುಂ ಮನದೊಳಗೆ
> ಚಿಂತಿಸುತ್ತಿರಲೊಂದು ದಿನ ವಸಿಷ್ಠರು ಬಂದು
> ಸಂತಾನದಭ್ಯುದಯವಾದಪುದುಯೆಂದವರ ಸಂತೈಸಿ ಮುನಿ ತೆರಳಲು ॥
> ಸಂತೋಷವುಂ ತಾಳ್ದರಾ ಮೇಲೆ ಬಂದುದು ವ
> ಸಂತ ಕಾಲವು ಬಳಿಕ ರಾಮನತಿ ಹರುಷದಿಂ
> ಕಾಂತೆಯೊಡಗೊಂಡು ಬಹುಸಂಭ್ರಮದಿ ರಾಜಿಸುವ ಕಾಂತಾರಕೈತಂದನು ॥

"ನಗರ ಶೋಧನೆಯ ಚಾರರೊಳೊರ್ವನಂ ಕರೆಸಿ ಕೇಳ್ದನಿಂತೆಂದು" (ಜೈ.ಭಾ. 18-41) ಎಂಬುದು ಶರಾವತಿ ಮಹಾತ್ಮೆಯಲ್ಲಿ ಹೀಗಿದೆ—

> ಮತ್ತೊಂದು ದಿನ ನಗರ ಶೋಧನೆಯ ಚಾರರಂ
> ಹತ್ತಿರಕೆ ಕರೆತರಿಸಿ ಕೇಳಿದಂ ಪುರದೊಳಗೆ
> ವಾರ್ತೆಯೇನೈ

"ಸಲ್ಲಲಿತ ಸೂರ್ಯನಿಗೆ ಕಾವಳಂ ಕವಿಯಲ್ಕೆ" (ಶ. ಮ. 3-14) ಎನ್ನುವುದಕ್ಕೆ ಲಕ್ಷ್ಮೀಶನ "ತರಣಿಯಂ ಕಾವಳಂ ಮುಸುಕಿದೊಡೇನಪ್ಪುದು" (18-43) ಮೂಲ. ರಜಕನ ಮಾತು ಕೇಳಿ ಚಿಂತೆಗೊಳಗಾದ ರಾಮ "ಬಂಧನಕ್ಕೊಳಗಾದ ಮದಗಜದವೋಲಿರಲ್" (ಶ.ಮ. 3-15) ಎಂಬ ಮಾತಿಗೆ ಲಕ್ಷ್ಮೀಶನ "ಬಂಧನಕ್ಕೊಳಗಾದ ಮತ್ತಗಜದಂದದಿಂ" (18-47) ಎಂಬ ಉಲ್ಲೇಖ ಆಧಾರ. ಈ ಸಂದರ್ಭದ ರಾಮನ ಮಾನಸಿಕ ಸಂಘರ್ಷ ಸುಬ್ರಹ್ಮಣ್ಯನಿಗೆ ಮುಖ್ಯವಲ್ಲ. ಲಕ್ಷ್ಮೀಶನನ್ನು ಇವನು ಹಿಂಬಾಲಿಸಿ ನೀರಸವಾಗಿ ಸಂಗ್ರಹಿಸುವನು. ಆಶ್ರಮದ ಸ್ತ್ರೀಯರನ್ನು ಭೇಟಿಯಾಗಬೇಕೆಂಬ ಸೀತೆಯ ಹಂಬಲ, ಧರಣಿಸುತೆಯನ್ನು ಅಡವಿಪಾಲು ಮಾಡಬೇಕಲ್ಲ ಎಂಬ ದುಃಖ ಸುಬ್ರಹ್ಮಣ್ಯನಿಗೆ ಲಕ್ಷ್ಮೀಶನಂತೆ ಮುಖ್ಯವಲ್ಲ!

> ತಾಯಿ ನೀನೇತಕೆಳಸಿದೆ ನಿನ್ನನೀಗ ರಘು
> ರಾಯಂ ತಪೋವನಕೆ ಕಳುಹಿ ಬರವೇಳ್ದಂ (ಜೈ.ಭಾ. 18-61)

ಎಂಬಲ್ಲಿನ ಭಾಷೆಯ ಲಾಲಿತ್ಯ ಧ್ವನಿ ಮಧುರತೆ ಶರಾವತಿ ಮಹಾತ್ಮೆಯ,

> ಮಿಡುಕುತ್ತೈತಂದು ಪೇಳಿದನು ಲಕ್ಷ್ಮಣ ನಿಮ್ಮ
> ಒಡೆಯನಪ್ಪಣೆಯಾಯ್ತು ವನಕೆ ಕಳುಹೆಂದೆಂಬ
> ನುಡಿ ಕೇಳಿ ಜಾನಕಿ

ಎಂಬಲ್ಲಿಲ್ಲ. ಲಕ್ಷ್ಮೀಶನ ಲಕ್ಷ್ಮಣನ ವಿನಯ, ವಿಧೇಯತೆ, ಸಜ್ಜನಿಕೆ ಇಲ್ಲಿ ಕಾಣದು. ಇಲ್ಲಿ ಮುಂದಿನ ನಾಲ್ಕು ಪದ್ಯಗಳಲ್ಲಿ ರಾಮನ ಸೈನ್ಯ ಲವನೊಂದಿಗೆ ಕಾಳಗಕ್ಕೆ

ತೊಡಗಿಬಿಡುತ್ತದೆ. ಸೀತಾಪರಿತ್ಯಾಗ ಸಂದರ್ಭದಲ್ಲಿನ ಶೋಕದ ಉತ್ಕಂದ, ಧರಣಿ ಸುತೆಗೆ ಪ್ರಕೃತಿಯು ಮಾಡುವ ಶುಶ್ರೂಷೆಯ ವೈಭವ ಇಲ್ಲಿಲ್ಲ. ಈ ಸಂದರ್ಭ ಲಕ್ಷ್ಮೀಶನಲ್ಲಿ ಮೂರು ಸಂಧಿಗಳಲ್ಲಿ ವಿಸ್ತಾರವಾಗಿ ಹರಡಿದ್ದರೆ, ಸುಬ್ರಹ್ಮಣ್ಯ ಹದಿ-ಮೂರು ಪದ್ಯಗಳಲ್ಲಿ ಸಂಗ್ರಹಿಸುವನು. ಹೀಗಾಗಿ ಸಂಗ್ರಹದಲ್ಲಿ ಸುಬ್ರಹ್ಮಣ್ಯ ಲಕ್ಷ್ಮೀಶನನ್ನು ಮೀರಿಸಬಲ್ಲ; ಆದರೆ ಭಾವಪೂರ್ಣ ಸನ್ನಿವೇಶ ಸೃಷ್ಟಿಯಲ್ಲಿ ಗೆಲ್ಲಲಾರ!

ನಾಲ್ಕನೆ ಸಂಧಿಯಿಂದ ಕಥೆಯು ಮೂಲದ್ರವ್ಯವನ್ನು ಸ್ಕಂದಪುರಾಣದಿಂದ ಸ್ವೀಕರಿಸಿದರೂ ವರ್ಣನೆಗೆ ಮತ್ತೆ ಲಕ್ಷ್ಮೀಶನೇ ಒತ್ತಾಸೆ. ಶತಾನೀಕನ ರಾಜ್ಯದ ಸಮೃದ್ಧಿಯ ವರ್ಣನೆಗೆ ಸುಬ್ರಹ್ಮಣ್ಯ, ಲಕ್ಷ್ಮೀಶ ಧರ್ಮರಾಯನ ರಾಜ್ಯದ ಸ್ಥಿತಿಗತಿ ಯನ್ನು ಕುರಿತು ಬರೆದ ಪದ್ಯವನ್ನು ಎರವಲಾಗಿ ಪಡೆಯುವನು (ಜೈ. ಭಾ. 2-5).

"ಕಳವು ಹಾದರ ನುಸುಳು ವೈರವಾದ ವಿಯೋಗ..." (4-24 ಶ.ಮ.)

ಎಂಬ ಪದ್ಯದಲ್ಲಿ ಸುಬ್ರಹ್ಮಣ್ಯ ಕೆಲವು ಪದಗಳನ್ನು ಬದಲಿಸುವ ಅಥವಾ ಬೇರೆ ಸಮಾನಾರ್ಥಕ ಪದ ಬಳಸುವ ಕೈಚಳಕ ತೋರುವನು. ರಾಜ್ಯ ಸುಭಿಕ್ಷವಾಗಿದ್ದರೂ "ಪುತ್ರರಂ ಪಡೆಯದಿಹ ಮಾನವಂ ಪರದಲ್ಲಿ ಮುಕ್ತಿಮಾರ್ಗಕೆ ಯೋಗ್ಯನಲ್ಲ" ಎಂಬ ಚಿಂತೆಗೆ ಪರಿಹಾರ ದೊರಕಿದ್ದು ಶಾಂಡಿಲ್ಯಮುನಿಯಿಂದ. ಪುತ್ರೋತ್ಸವವಾಗಿ ಆನಂದದಿಂದಿರಲು ದೇವಲೋಕಕ್ಕೆ ಪ್ರಯಾಣ ಮಾಡುವ ಸಂದರ್ಭವೊದಗಿತು. ಇಂದ್ರನಿಗೆ ರಾಕ್ಷಸಗಣದ ತೊಂದರೆಯೊದಗಲು ನಾರದನ ಸಲಹೆ ಮೇರೆಗೆ ಶತಾನೀಕ ನಿಗೆ ಆತ ಸಹಾಯ ಯಾಚಿಸಿ ಪತ್ರವೊಂದನ್ನು ಬರೆದ. ಇದು ದುಷ್ಟಬುದ್ಧಿ ಮದನ ನಿಗೆ ಬರೆದ ಓಲೆಯ ಪ್ರತಿರೂಪ. (ಜೈ,ಭಾ. 32-25, 26) ಸಾರಾಂಶ ಮಾತ್ರ ಬೇರೆ ;

ಸ್ವಸ್ತಿ ಶ್ರೀಮತ್ಸೋಮ ವಂಶವಾರಿಧಿ ಚಂದ್ರ
ಶಸ್ತ್ರಾಸ್ತ್ರ ಕುಶಲ ನಿಗಮಾಗಮ ವಿಚಾರ ಹರಿ
ಭಕ್ತಿ ಪರಿಪೂರ್ಣ ಸಕಲೈಶ್ವರ್ಯ ಸಂಪನ್ನ ಮಿತ್ರಜನ ಕಾಮಧೇನು
ಪೃಥ್ವಿ ಪಾಲಕ ಶಿರೋಮಣಿ ದುಷ್ಟನಿಗ್ರಹ ಸ
ಮಸ್ತ ಗುಣಯುತ ಶಿಷ್ಟಪಾಲ ಹಸ್ತಿನ ಪುರದ
ಪಾರ್ಥನ ಕುಮಾರಕನ ಪೌತ್ರಜ ಶತಾನೀಕಗಿತ್ತೆನಾಶೀರ್ವಾದವ ॥

(ಶ.ಮ. 4–37)

ನೇರ ಹಾಗೂ ಸರಳ ಒಕ್ಕಣೆ ಶತಾನೀಕನ ಸಹಾಯ ಯಾಚಿಸುವುದು "ಹಿರಿಯರ್ ತಾವಿಂತು ಬರೆವುದುಚಿತವೆ ನಮಗೆ ಬರುವೆನೆಂದೆನುತ" ಶಸ್ತ್ರಸನ್ನದ್ಧನಾಗಿ ಹೊರಟು ರಕ್ಕಸರ ಸದೆಬಡಿದ. ಮಾನವನಾಗಿ ದೇವಲೋಕಕ್ಕೆ ತೆರಳಿ ದೇವತೆಗಳ ನೆಮ್ಮದಿಗೆ ಕಾರಣೀಭೂತನಾದ. ಆದರೆ ಯುದ್ಧದಲ್ಲಿ ಶತಾನೀಕ ಮರಣ ಹೊಂದಿದ. ಇದ ರಿಂದಾಗಿ ಆತನ ಮಗ ಸಹಸ್ರಾನೀಕನನ್ನು ಇಂದ್ರ ಕರೆದು ಸತ್ಕರಿಸಿದ. ಆದರೆ ತನ್ನ

ಹುಟ್ಟಿಗೆ ಕಾರಣವಾದ ಶಾಪದ ವಿಷಯವನ್ನು ನಾರದನಿಂದ ತಿಳಿದು ಅದೇ ಗುಂಗಿನಲ್ಲಿ ಬರುತ್ತಿದ್ದವನನ್ನು ತಿಲೋತ್ತಮೆ ರತಿಕೇಳಿಗೆ ಆಹ್ವಾನಿಸಿದಳು. ಒಮ್ಮೆ ತನ್ನ ಲಜ್ಜೆಗೆಟ್ಟ ನೀತಿಯಿಂದ ಶಾಪ ಪಡೆದಿದ್ದರಿಂದ ತತ್‌ಕ್ಷಣ ಜಾಗ್ರತನಾಗಿ ತಿಲೋತ್ತಮೆಯ ಆಹ್ವಾನವನ್ನು ತಿರಸ್ಕರಿಸಿದ! 'ಪತ್ನಿಯಗಲಿಕೆಯೊದಗಲಿ' ಎಂದು ಶಾಪವಿತ್ತಳು ತಿಲೋತ್ತಮೆ! ವಿವಾಹವೇ ಆಗಿರದಿದ್ದ ಸಹಸ್ರಾನೀಕನಿಗೆ ತಿಲೋತ್ತಮೆ ಶಾಪವಿತ್ತು ಮದುವೆಗೆ ಅಣಿಮಾಡಿದಳು. ಅಂದರೆ ಈತ ಮೃಗಾವತಿಯನ್ನು ವರಿಸುವುದು ಪೂರ್ವನಿಯೋಜಿತ! ಬ್ರಹ್ಮಸಭೆಯಲ್ಲಿ 'ಲಂಬುಸೆ'ಯ ನರ್ತನದ ವೇಳೆ ಸೆರಗು ಜಾರಿದಾಗ ಈತ ತದೇಕಚಿತ್ತನಾಗಿ ಆಕೆಯನ್ನು ದಿಟ್ಟಿಸಿದ. (ಆಗ ಅವನ ಹೆಸರು ವಿಧೂಮ) ಉಳಿದವರು ತಲೆತಗ್ಗಿಸಿದರು. ಇವನ ಲಜ್ಜೆಗೆಟ್ಟ ವರ್ತನೆ ಬ್ರಹ್ಮನಿಗೆ ತಿಳಿದು ಶಾಪವಿತ್ತುದ್ದರ ಫಲವಾಗಿ ಭೂಮಿಯಲ್ಲಿ ಜನ್ಮ ತಳೆದ. ಈಗ ಆತ ವರಿಸಿದ ಮೃಗಾವತಿ ಗರ್ಭಿಣಿಯಾಗಿದ್ದು ಕೆಂಪು ನೀರಿನ ಕೊಳದಲ್ಲಿ ಸ್ನಾನಮಾಡಬೇಕೆಂಬ ಹಂಬಲವುಳ್ಳವಳು. ಕುಸುಂಬೆ ರಸದಲ್ಲಿ ಸ್ನಾನಮಾಡಿ ಮೇಲೆದ್ದ ಆಕೆ ಹಣ್ಣಿನಂತೆ ಕೆಂಪಗೆ ಕಾಣುತ್ತಿದ್ದುದರಿಂದ ತಿನ್ನುವುದಕ್ಕೆಂದು ಗರುಡ ಎತ್ತಿಕೊಂಡು ಹಾರಿದ. ಮೃಗಾವತಿ ಸ್ಮರಿಸಿದಳು ಹರಿಯನೋರಂತೆ—

ಜಯ ಜಯ ಜಗನ್ನಾಥ ಜಯ ಸುಪರ್ಣ ವರೂಥ
ಜಯ ಜನಾರ್ದನ ಕೃಷ್ಣ ಜಯ ವಿಜಿತ ಶೀತೋಷ್ಣ
ಜಯ ಜಯಾಂಬುಜ ನೇತ್ರ ಜಯದೇವ ನುತಿಪಾತ್ರ ಜಲಧಿಜಾ ಪ್ರಿಯ ಕಳತ್ರ ॥

ಜಯ ಜಯತು ಹೃಷಿಕೇಶ ಜಯದುರಿತ ಗಣನಾಶ
ಜಯ ಜಯತು ಮುರವೈರಿ ಜಯ ಜಯಾಚ್ಯುತ ಶೌರಿ
ಜಯ ಭಜಕ ಸುಕ್ಷೇಮ ಜಯ ನೃಸಿಂಹಸ್ವಾಮಿ ಜಯವಿತ್ತು ಸಲಹೆನ್ನನು ॥

(ಶ.ಮ. 5-16)

ಹರಿಭಕ್ತೆಯಿವಳೆಂದು ಗರುಡ ಉದಯ ಪರ್ವತದ ಕಾನನದ ಮಧ್ಯದಿ ಜೀವಸಹಿತ ಬಿಟ್ಟು ತೆರಳಿದ. ನಗರಕ್ಕೆ ಹಿಂದಿರುಗಿಸುವ ಯೋಚನೆ ಆತನಿಗೆ ಬರಲಿಲ್ಲ! ಮುನಿಪತ್ನಿಯರನ್ನು ಸತ್ಕರಿಸುವ ಹಂಬಲ ಸೀತೆಯನ್ನು ಕಾಡುಪಾಲು ಮಾಡಲು ನೆಪವಾದಂತೆ ಕೆಂಪುನೀರಿನಲ್ಲಿ ಸ್ನಾನಮಾಡಿದ್ದೆ ಮೃಗಾವತಿ ಅಡವಿ ಸೇರಲು ನಿಮಿತ್ತ. ಇಲ್ಲಿಂದ ಮುಂದೆ ಲಕ್ಷ್ಮೀಶನ ಸೀತಾಪರಿತ್ಯಾಗದ ಪ್ರಭಾವ ದಟ್ಟವಾಗಿದೆ. "ಹೆಣ್ಣಾಗಿ ಏಕೆ ಹುಟ್ಟಿಸಿದೆಯೋ" ಎಂದು ನಾನಾ ಪ್ರಕಾರ ದುಃಖಿಸುತ್ತಾಳೆ—

ಪೃಥ್ವಿಪಾಲನ ನೆನೆದು ಕರಗುವಳ್ ಮರುಗುವಳ್
ಹತ್ತಿರಿಹ ಮೃಗತತಿಯ ನೋಡುವಳ್ ಬಾಡುವಳ್
ಸತ್ವವಿಲ್ಲದೆ ಬಿದ್ದು ಹೊರಳುವಳ್ ನರಳುವಳ್ ಮಿತ್ರ[illegible] ॥

ಸುತ್ತಮುತ್ತಲು ಪಥವ ಹುಡುಕುವಳ್ ಮಿಡುಕುವಳ್
ನೇತ್ರಜಲ ಸಾಗರದೊಳಾಳುವಳ್ ಬೀಳುವಳ್
ಚಿತ್ತದಲಿ ಸುಯ್ದು ಬಾಯಾರುವಳ್ ಚೀರುವಳ್ ಮತ್ತಕಾಶಿನಿ ಮನದೊಳು ॥

(ಶ.ಮು. 5–22)

ಇದಕ್ಕೆ ಲಕ್ಷ್ಮೀಶನ "ನಡೆಗೊಳಲ್ ಕಂಡು ಬಾಯಾರ್ವಳಂ..." (ಜೈ.ಭಾ. 19-30) ಪದ್ಯ ಮೂಲ. ಲಕ್ಷ್ಮೀಶ ಬಳಸಿದ ಪದಗಳ ಸ್ಥಾನ ಬದಲಿಸುವ ಚಾಕಚಕ್ಯತೆ ತೋರಿದರೆ ಸುಬ್ರಹ್ಮಣ್ಯನ ಕೆಲಸ ಮುಗಿದಂತೆ! ಮುಂದಿನ ಪದ್ಯವಂತು ಲಕ್ಷ್ಮೀಶನ (ಜೈ.ಭಾ. 19-33) ಯಥಾವತ್ತಾದ ಅನುಕರಣೆ ;

ಚರಿಸಲೊಲ್ಲನು ಮರುತ ಬೆಳಗಲೊಲ್ಲನು ತರಣಿ
ಮೊರೆಯಲೊಲ್ಲವು ತುಂಬಿ ಕುಣಿಯಲೊಲ್ಲವು ನವಿಲು
ಕರೆಯಲೊಲ್ಲವು ಪಿಕಂ ನಡೆಯಲೊಲ್ಲವು ಹಂಸೆ ನುಡಿಯಲೊಲ್ಲವು ಗಿಳಿಗಳು ॥
ನೆರೆಯಲೊಲ್ಲವು ಹರಿಣ ನಲಿಯಲೊಲ್ಲ ಚಕೋರಿ
ಅರಳಲೊಲ್ಲವು ಸುಮವು ಒಲೆಯಲೊಲ್ಲವು ವೃಕ್ಷ
ತಿರುಗಲೊಲ್ಲವು ಸಿಂಹ ಕೆಲೆಯಲೊಲ್ಲವು ಪಶುಗಳರಸಿಯಳುವುದನು ನೋಡಿ ॥

ಇದರ ಭಾವ, ಪದಪುಂಜವೆಲ್ಲ ಲಕ್ಷ್ಮೀಶನದು. ಸೀತಾಪರಿತ್ಯಾಗಕ್ಕೆ ಮೃಗಾವತಿ ಸಂದರ್ಭವನ್ನು ಸಂವಾದಿಯಾಗಿ ಮಾಡಿ ಕವಿ ಲಕ್ಷ್ಮೀಶನನ್ನೆ ಅನುಸರಿಸುವನು. ಸೀತೆಯ ದುಃಖಕ್ಕೆ ಸಮನಾದದ್ದು ಮೃಗಾವತಿಯ ಶೋಕ ಎಂಬುದನ್ನು ಕವಿ ನಿರೂಪಿಸಲು ಹೊರಟಂತಿದೆ. ಮುಂದಿನ "ಹಲವು ಪರಿಯಲಿ ದುಃಖಪಡುವ ಮೃಗಜಾತಿಗಳು" (ಶ.ಮು. 5-25) ಪದ್ಯವನ್ನು ಜೈಮಿನಿ ಭಾರತದ "ಬೀಸಿದುವು ಬಾಲವೊಳ್" (19-34) ಪದ್ಯದೊಂದಿಗೆ ಹೋಲಿಸಬಹುದು. ಅನಾಥೆ ಮೃಗಾವತಿಯನ್ನು ಜಮದಗ್ನಿಮುನಿ ಮಗಳ ರೀತಿಯಲ್ಲಿ ಕೊಂಡೊಯ್ದು ರಕ್ಷಿಸಿದ, ವಾಲ್ಮೀಕಿ ಸೀತೆಯನ್ನು ಸಲಹಿದಂತೆ. ಗರ್ಭಿಣಿ ಮೃಗಾವತಿ ನವಮಾಸ ತುಂಬಲು ಶುಭದಿನದಂದು ಪುತ್ರನೊಬ್ಬನಿಗೆ ಜನ್ಮವಿತ್ತಳು. ಜಮದಗ್ನಿ ಆ ಮಗುವಿಗೆ ಉದಯನೆಂದು ನಾಮಕರಣ ಮಾಡಿ ಶಾಸ್ತ್ರೀಯವಾಗಿ ಎಲ್ಲ ವಿದ್ಯೆಗಳನ್ನು ಕಲಿಸಿದ. ಸಕಲವನ್ನೂ ತೊರೆದ ಕಾಡಿನ ಮುನಿಗೂ ಮಕ್ಕಳ ಮೋಹ!

ಆ ಮಹಾ ಜಮದಗ್ನಿ ಜಪಸಮಾಧಿಯನುಳಿದು
ಸೋಮಕುಲ ಸಂಭವನನೆತ್ತಿ ಮುದ್ದಾಡುತಂ
ಬಾ ಮರಿಯೆ ಬಾ ಗಿಣಿಯೆ ಬಾ ಮುದ್ದು ಬಾ ತಂದೆ ಬಾರೆನ್ನುತಾಡಿಸುವನು ॥
ಆ ಮೇಲೆ ಪಾಲ್ಗುಡಿಸಿಯಳುತಿರಲ್ ಬೆಗ್ಗಿಯಂ
ಪ್ರೇಮದಿಂದಿತ್ತು ತೊಟ್ಟಿಲೊಳಿಟ್ಟು ನೇಣ್ವಿಡಿದು
ತಾ ಮಾಡುವ ಜೋಗುಳದ ಹಾಡಿ ತೂಗುತಿರ್ದನಾ ಮುನಿಪ ದಿನದಿನದೊಳು ॥

(ಶ.ಮು. 5–37)

ಬಾಲತೊಡಿಗೆಗಳನ್ನು ಮಾಡಿಸಿದ ಮುನಿ ಬಳಿಕ
ಕಾಲ ಸರಪಣಿ ಗೆಜ್ಜೆ ಲಲ್ಲು ನೂಪುರಗಳಂ
ಕೀಲಿಸೊಡ್ಡಾಣವಂ ಡಾಬು ಕಿರುಗಂಟೆಗಳ ನೇವಳವ ಹರಳುಂಗುರ

(ಶ.ಮು. 5-38)

ಇತ್ಯಾದಿಗಳನ್ನು ಲೀಲೆಯಿಂ ಮಾಡಿಸಿದನು. ಕವಿ ನೀಡಿದ ವಿವರ ಸುಂದರ, ಬಂಧುರ, ಮುನಿಯ ನಡೆವಳಿಕೆ ಭಾವಪೂರ್ಣ ; ನಿಜ. ಆದರೆ ಇದಕ್ಕೂ ಲಕ್ಷ್ಮೀಶನೇ (ಜೈ.ಭಾ. 19-47) ಮತ್ತೆ ಆಶ್ರಯದಾತ. ಲಕ್ಷ್ಮೀಶನ ಕಥಾಸರಣಿಯನ್ನನುಸರಿಸಿ ಬರುವ ಕಾವ್ಯ ಶೈಲಿಯಲ್ಲೂ ಅವನಿಗೇ ಋಣಿ. ಎಲ್ಲೋ ಒಂದೆರಡು ಕಡೆ ಸುಬ್ರಹ್ಮಣ್ಯನ ಪ್ರತಿಭೆಯ ಹೊಳಪು ಕಂಡುಬರುವುದು. ಮಗು ಉದಯನನ್ನು ಸಾಕುವ ನುಡಿಗಲಿಸುವ ಮೃಗಾವತಿಯ ಚಿತ್ರವಿದು :

ನುಡಿವಳಕ್ಕರವಿಡಿದು ನಡೆಸುವಳ್ ಚಲ್ಲಣವ
ನುಡಿಸುವಳ್ ಕವಚವಂ ತೊಡಿಸುವಳ್ ಭೂಷಣವ
ನಿಡಿಸುವಳ್ ಬಳಿಕೊಡಂಬಡಿಸುವಳ್ ತೋಳಿಗೇಪಡಿಸುವಳ್ ತೊರೆದ ಮೊಲೆಯ ॥

(ಶ.ಮು. 5-41)

ತಾಯಿಯ ವಾತ್ಸಲ್ಯ ಭಾವ ಇಲ್ಲಿ ಹೊನಲಾಗಿ ಹರಿದಿದೆ. ಕವಿಯ ಪದ ಜೋಡಣೆ ಈ ಭಾವವನ್ನು ಪೋಷಿಸುವಂಥದು. ಕವಿ ವೈಯಕ್ತಿಕ ಪ್ರತಿಭೆಗೆ ತನ್ನನ್ನು ಒಡ್ಡಿಕೊಳ್ಳದಿದ್ದರೆ, ಅನುಭವದಲ್ಲಿ ಕೊರತೆಯಿದ್ದರೆ, ಇಂತಹ ವಿವರಗಳನ್ನು ನೀಡಲಾರ.

ಅಡವಿ, ಆಶ್ರಮದ ರಾಜಕುಮಾರನೊಂದು ದಿನ ಕಾಡಿನಲ್ಲಿ ಹಾವಾಡಿಗನ ಕೈಯಿಂದ ನಾಗವೊಂದನ್ನು ರಕ್ಷಿಸಿದನು. ಹಾವಾಡಿಗನಿಗೆ 'ರತ್ನಕಂಕಣ' ನೀಡಿದನು. ನಾಗನ ಕೃಪೆಗೆ ಪಾತ್ರನಾದ ಕುಮಾರ ಅವನ ಅಪೇಕ್ಷೆಯಂತೆ ನಾಗಲೋಕಕ್ಕೆ ಹೋಗಿ ನಾಗಕನ್ಯೆಯನ್ನು ವಿವಾಹವಾದನು. ಹಾವಾಡಿಗನಿಗೆ ನೀಡಿದ 'ಕಂಕಣ' ಕಥೆಯ ತಿರುವಿಗೆ, ಮೃಗಾವತಿಯನ್ನು ಪತ್ತೆಮಾಡಲು ಮಹತ್ವದ ಪಾತ್ರವಹಿಸುವುದು. ಸುಖಾಂತ್ಯಕ್ಕೆ ಇದೇ ಮೂಲವಾಗುವುದು. 'ರತ್ನಕಂಕಣ'ವನ್ನು ಕೌಶಾಂಬಿ ನಗರದಲ್ಲಿ ವಿಕ್ರಯಿಸಲು ಯತ್ನಿಸುತ್ತಿದ್ದ ಹಾವಾಡಿಗನನ್ನು ನರ್ತಕನೋರ್ವ ರಾಜಾಸ್ಥಾನಕ್ಕೆ ಕರೆತಂದ. ಅರಸನು ಹಾವಾಡಿಗನನ್ನು ಪ್ರೀತಿಯಿಂದ ಕರೆದು ಮಾತನಾಡಿಸುವ ರೀತಿ ಶಬ್ದಚಿತ್ರದಂತಿದೆ ;

ಬಾರಯ್ಯ ಶಬರ ನೀ ಬೆದರದಿರು ಮನದಿ ನಿ
ನ್ನೂರಾವುದಯ್ಯ ನೀನೆಲ್ಲಿಂದ ನಡೆತಂದೆ
ಯಾರು ಕೊಟ್ಟರು ಕಡಗವನ್ನು ನಿನ್ನಯ ಕೈಗೆ ಸೇರಿ ದಿನವೆಷ್ಟಾದುದು
ಚೋರವಿದ್ಯದಿ ಕದ್ದುಕೊಂಡು ಬಂದಿರುವೆಯೋ
ಕಾರಣವನೆಲ್ಲವಂ ಪೇಳು ನಿನಗೀ ಕ್ಷಣದಿ
ನೂರು ವರಹ ಸ್ವಾಸ್ತಿಯುಂಬಳಿಯ ಜಿಡ್ಡುವನೆ ಭೂಮಿದಾನಮದೀಗಳೀವೆನು ॥

(ಶ.ಮು. 5-64)

ಅರಸನ ಕಾತರ, ಕುತೂಹಲ, ಹಾವಾಡಿಗನಿಗಿರುವ ಎಚ್ಚರಿಕೆ ನಯವಾಗಿ ಸೊಗಸಾಗಿ ಮೂಡಿದೆ. ಈ ಸನ್ನಿವೇಶ ಶಾಕುಂತಲ ನಾಟಕದ ಚಿತ್ರವನ್ನು ನೆನಪಿಸುತ್ತದೆ. ಹಾವಾಡಿಗನಿಂದ ಸೂಚನೆ ಪಡೆದ ಅರಸ ಆಶ್ರಮದತ್ತ ಹೊರಡುವನು : "ಎಲ್ಲಿಯುಂ ಮೆರೆವ ತಂಗೊಳಗಳಿಂ ತೃಣಗಳಿಂ" (ಶ.ಮ. 5–78) ಆಶ್ರಮದ ಪರಿಸರ ಕಂಗೊಳಿಸುತ್ತಿತ್ತು. ಇದಕ್ಕೆ ಲಕ್ಷ್ಮೀಶನ "ಎಲ್ಲಿಯುಂ ಪರಿವ ಪೆರ್ದೊರೆಯಿಂದೆ ಕೆರೆಯಿಂದೆ" (ಜೈ.ಭಾ 3–2) ಪದ್ಯದಿಂದ ಭಾವವನ್ನು ಸ್ವೀಕರಿಸಿದಂತಿದೆ. ಅರಸು ಆಶ್ರಮಕ್ಕೆ ಬರುವ ವೇಳೆಗಾಗಲೆ ನಾಗಲೋಕದ ಕನ್ಯೆಯಲ್ಲಿ ಉದಯ ಮಗುವೊಂದನ್ನು ಪಡೆದಾಗಿತ್ತು. ಪತ್ನಿ, ಸುತ, ಮೊಮ್ಮಗರನ್ನು ಒಡಗೂಡಿಕೊಂಡು ಅರಸನು ಆಶ್ರಮದಿಂದ ಅರಮನೆಗೆ ಹಿಂದಿರುಗಿದ. ಆದರೆ ಶಾಪ ವಿಮುಕ್ತಿಯ ದಾರಿ ಕಾಣದೆ ಹಂಬಲಿಸುತ್ತಿರಲು, ಅಶರೀರವಾಣಿಯ ಅಪ್ಪಣೆಯಂತೆ ಶರಾವತಿ ತೀರಕ್ಕೆ ಬಂದು, ಮಿಂದು, ರಾಮೇಶ್ವರನನ್ನು ಸದ್ಭಾವದಿಂದ ಅರ್ಚಿಸಿ ಶಾಪಮುಕ್ತನಾಗಿ ದೇವಲೋಕ ಸೇರಿದನು. ಇಲ್ಲಿಗೆ ಕಥೆ, ಕಾವ್ಯ, ಮುಗಿದಂತೆ! ಆದರೆ ಕವಿಗಿನ್ನೂ ವಿಷ್ಣು, ಲಕ್ಷ್ಮಿ, ಗರುಡ ತೀರ್ಥದ ಮಹಿಮೆಯನ್ನು ಚಿತ್ರಿಸುವುದು ಹಾಗೇ ಉಳಿದಿರುವುದರಿಂದ, ಕಾವ್ಯ ಈ ತೀರ್ಥಗಳ ಮಹಿಮೆಯನ್ನು ವಿಸ್ತರಿಸುವ ವಸ್ತುವನ್ನು ಕೇಂದ್ರದಲ್ಲಿಟ್ಟುಕೊಂಡು ಹೊಸದಾಗಿ ಆರಂಭವಾಗುವುದು. ಸಹಸ್ರಾನೀಕನ ಮಗ ಉದಯ ಕಥಾನಾಯಕ.

ತಂದೆಯ ಅನಂತರ ಅಧಿಕಾರಕ್ಕೆ ಬಂದ ಉದಯನಿಗೆ ದುರ್ಬುದ್ಧಿ ಬಂತು. "ಚೆಲ್ವಿಕೆಯಾದ ಹೆಣ್ಣುಗಳನೆಲ್ಲರಂ ತರಿಸಿ" ಘೋಷಿಸುತ ಬನ್ನ ಬಡಿಸುತಿರ್ದನು. ಮಠದೊಳಿಹ ಸಂನ್ಯಾಸಿಗಳಿಗೆ ದಂಡವ ಕಟ್ಟಿ ಕೊಲ್ಲಿಸಿದ. ಐಷಾರಾಮದ ಜೀವನದ ಪರಿಣಾಮವಾಗಿ ದಾರಿದ್ರ್ಯಪ್ರಾಪ್ತಿಯಾಯ್ತು. ಇದನ್ನೇ ಕಾಯುತ್ತಿದ್ದ ವಂಗದೇಶದಧಿಪತಿ ಸೌಳದಾಖ್ಯ ದಾಳಿಮಾಡಿದ. ನಡೆದ ಘೋರ ಯುದ್ಧದಲ್ಲಿ—

ಪರಿಸಿದರ್ ಕರೆಕರೆಯುತೊರಸಿದರ್ ಕುದುರೆಯಂ
ಪರಿಸಿದರ್ ಬಿಲುಗಳಂ ತರಿಸಿದರ್ ಕೋಲ್ಮಳೆಯ ॥ (ಶ.ಮ. 6–13)

ಎಲ್ಲಿಯುಂ ಮಡಿದಿರುವ ಹಸ್ತಿಮಯ ಪತ್ತಿಮಯ
ಎಲ್ಲಿಯುಂ ಕೊರಳುಡಿದ ವಾಜಿಮಯ ತೇಜಿಮಯ ॥ (ಶ.ಮ. 6–16)

ಧರಣಿ ತಳದಲಿ ನಿಂತು ಹೆಣಗುವರ್ ಮತ್ತೊಮ್ಮೆ
ಭರದಿ ಜಿಗಿದಂಬರದಿ ಹೋರಾಡುತಿಹರೊಮ್ಮೆ ॥ (ಶ.ಮ. 6–32)

ಇಂತಹ ಯುದ್ಧ ವರ್ಣನೆ ಲಕ್ಷ್ಮೀಶನ ಪ್ರಭಾವದಿಂದ ಬರೆದವು. ಸ್ವತಃ ಕಲಿಯಾಗಿಯೋ ನೋಡಿಯೋ ಅನುಭವಿಸಿದ್ದರಿಂದ ಉಂಟಾದ ಪರಿಣಾಮವಿದು. ಬಣ್ಣವರ್ಣನೆ. ಅನುಪ್ರಾಸವನ್ನು ಸೃಷ್ಟಿಸುವುದರಲ್ಲಿಯೇ ತೃಪ್ತಿಪಟ್ಟುಕೊಳ್ಳುವನು. ಅವನ ಈ ವಿವರಗಳು ಕಾವ್ಯದ ಸಂದರ್ಭದಲ್ಲಿ ಕರಗಿಕೊಳ್ಳದೆ. ಬೇರೆಯವರಿಂದ ಎರವಲು ಪಡೆದವನ್ನೆಂದು ಥಟ್ಟನೆ ಹೊಳೆದುಬಿಡುತ್ತದೆ. ಕೊನೆಗೂ ಉದಯ ಸೋತು

ಹೆಂಡತಿ ಮಗನೊಂದಿಗೆ ಕಾಡುಪಾಲಾದ ಪತ್ನಿ ಸುಮತಿ ಬಸವಳಿದು ಮರನಡಿಯಲಿ ಕುಳಿತಳು. ಆದರೆ ಮಗ ಸುಮ್ಮನಿರಲಿಲ್ಲ!

> ಅಶನವಿಲ್ಲದೆ ಮೂರುದಿನವಾಗೆ ಬಾಲಕಂ
> ಪಸಿದು ಕಂಗೆಡುತಳುತ ಕಾದಿದಂ ಜನನಿಯಂ ॥ (ಶ.ಮ. 6–52)
>
> ಅಪ್ಪಯ್ಯ ಕೇಳೆನಗೆ ಹಸಿವಾಗುತಿದೆ ಬಹಳ
> ತುಪ್ಪಾನ್ನವನ್ನು ಬಡಿಸೆಂದು ಜನನಿಗೆ ಪೇಳು
> ಕ್ಷಿಪ್ರದಿಂ ಪೆಂಪುವಕ್ಕಸಲಕ್ಕಿ ಕೊಬರಿಗಳಸಪ್ಪಾಲು ಲಡ್ಡಿಗೆಯನು ॥
> ಹಪ್ಪಳವನಾದರುಂ ಕೊಡಿಸು ಬಾಯಾರುತಿದೆ
> ವಪ್ಪದಿಂ ನೊರೆಹಾಲು ಸಕ್ಕರೆಯ ಕುಡಿಸೆಂದು
> ದೊಪ್ಪನವನಿಯಲಿ ಬಿದ್ದುರುಳುತಿಹ ಮಗನ ತೆಗೆದಪ್ಪಿಕೊಂಡಳುತಿರ್ದಳು ॥
>
> (ಶ.ಮ. 6–53)

ತಂದೆ ಏನು ಹೇಳಿಯಾನು? ಕರುಳಿನ ಕುಡಿ, ಹೆತ್ತ ಕರುಳು ಕಣ್ಣೆದುರು ಬಿದ್ದು ಹೊರಳಾಡಿ ಗೋಳಿಡುತ್ತಿರೆ ಅರಸ ದಗ್ಧಹೃದಯನಾಗಿ ಪಶ್ಚಾತ್ತಾಪಗೊಂಡನು. ತನ್ನ ಕುಟುಂಬದ ಸ್ಥಿತಿಗೆ ಕಣ್ಣೀರು ಮಿಡಿದು ಮೂರ್ಛೆಹೋದ. ಇದೀ ಸನ್ನಿವೇಶ ಹರಿಶ್ಚಂದ್ರ ಕಾವ್ಯವನ್ನು ನೆನಪಿಸುತ್ತದೆ. ಈ ಸಮಯಕ್ಕೆ ಅಲ್ಲಿಗಾಗಮಿಸಿದ ಸಂವರ್ತಕ ಮುನಿಯ ಉಪದೇಶದಂತೆ ಲಿಂಗನಮಕ್ಕಿಗೆ ಬಂದು ಶರಾವತಿಯಲ್ಲಿ ಮಿಂದು ಏಕಾಕ್ಷರೀ ಮಂತ್ರದ ಉಪಾಸನೆಯ ಮಹಿಮೆಯಿಂದ ವಿಷ್ಣು, ಗರುಡ, ಲಕ್ಷ್ಮೀ ಕೀರ್ತನೆಯಿಂದ ಲಭ್ಯವಾದ ಬಿಲ್ಲು, ಬಾಣ, ಬತ್ತಳಿಕೆ, ಕವಚಾದಿಗಳ ನೆರವಿನಿಂದ ಸಾಳವನ ಮೇಲೆ ಯುದ್ಧಮಾಡಿ ಸ್ವರಾಜ್ಯವನ್ನು ಗೆದ್ದು ಪುನಃ ತನ್ನ ರಾಜ್ಯಕ್ಕೆ ಅಧಿಕಾರಿಯಾದ. ಕೊನೆಗೆ ಲಿಂಗನಮಕ್ಕಿಗೆ ಪತ್ನಿಸಹಿತ ಬಂದು ಶ್ರೀ ರಾಮೇಶ್ವರನ ಆರಾಧನೆ ಮಾಡಿ ಮುಕ್ತಿ ಹೊಂದುವರು.

ಶರಾವತಿಯಲ್ಲಿ ಸ್ನಾನ, ಆರಾಧನೆ, ಮುಕ್ತಿ ಇದು ಈ ಕಥೆಯ ಕೇಂದ್ರ ಕ್ರಿಯೆ. ಇದಕ್ಕೆ ಸಂಬಂಧಿಸಿದಂತೆ ಘಟನೆಗಳು ಹುಟ್ಟಿಕೊಳ್ಳುತ್ತವೆ: ವಿವರಗಳು ತೆರೆದುಕೊಳ್ಳುತ್ತವೆ. ಈ ಕಥೆಯ ಮೊದಲ ಭಾಗದಲ್ಲಿ ಉದಯನ ದುರಾಚಾರದ ರಸಿಕ ಬದುಕಿನ ಚಿತ್ರಗಳಿವೆ. ಇದರ ಹಿನ್ನೆಲೆಯಲ್ಲಿಯೇ ಕಾವ್ಯದ ಮುಂದಿನ ಕ್ರಿಯೆ ನಡೆದು ಧೋರಣೆ ರೂಪುಗೊಳ್ಳುತ್ತದೆ. ಪೂರ್ವಾರ್ಧದಲ್ಲಿನ ದುರಾಚಾರದ ಮೂಲಕ ಒದಗಿದ ದುರವಸ್ಥೆ, ಆ ಮೂಲಕ ಉದಯನ ಮನಃಪರಿವರ್ತನೆ, ಸಾತ್ವಿಕತೆ, ಸನ್ಮಾರ್ಗವನ್ನು ನಿರ್ದೇಶಿಸುತ್ತದೆ. ಅಲ್ಲದೆ ಪೌರಾಣಿಕ ಹಾಗೂ ಸಾಹಿತ್ಯದೃಷ್ಟಿಯನ್ನು ಕೇಂದ್ರೀಕರಿಸಲಾಗಿದೆಯೇ ಹೊರತು ಮಾನವ ಸಹಜ ಸ್ವಭಾವದ ಸಂಘರ್ಷ, ಆಂತರಿಕ ಹೋರಾಟದಲ್ಲಿ ಕವಿಗೆ ಯಾವ ಆಸಕ್ತಿಯೂ ಇಲ್ಲ. ಮಗ ಹಾಗೂ ಹೆಂಡತಿ ಹಸಿವ ಕಷ್ಟಕ್ಕೆ ರಾಜ ಸಿಟ್ಟಾಗಿಬಿಟ್ಟನೇ ಹೊರತು ಪಶ್ಚಾತ್ತಾಪ

ಪಡಲಿಲ್ಲ. ಪಾಪಪ್ರಜ್ಞೆ ಅವನಲ್ಲಿ ಕೊನೆಗೂ ಉದಿಸಲಿಲ್ಲ. ಆತನಿಗೆ ತಾತ್ತ್ವಿಕವಾಗಿ ಜ್ಞಾನೋದಯವಾಯಿತೆಂಬ ಸೂಚನೆಯಿಲ್ಲ. ಅನಿವಾರ್ಯತೆಗೆ ಆತ ಬಾಗಿದ್ದೇ ಹೊರತು ಅಹಂಕಾರನಿರಸನದಿಂದಲ್ಲ. ಆತ ಪೂರ್ಣ ಸಾಮ್ರಾಜ್ಯವನ್ನು ಗೆದ್ದದ್ದಾದರೂ ಸ್ವಸಾಮರ್ಥ್ಯದಿಂದಲ್ಲ. ಹೀಗಾಗಿ ಉದಯನ ಪಾತ್ರ ತೀರಾ ಜಾಳುಜಾಳಾಗಿ ಕಥೆಯನ್ನು ದೌರ್ಬಲ್ಯಕ್ಕೀಡುಮಾಡುತ್ತದೆ. ಇದ್ದದ್ದರಲ್ಲಿ ಮಗುವಿನ ಮುಗ್ಧಮನಸ್ಸು ಸುಂದರವಾಗಿ ಅಭಿವ್ಯಕ್ತಿಗೊಂಡಿದೆ.

ಪಾತಾಳದಿಂದ ದೇವಲೋಕದ ವರೆಗೆ ಕಾವ್ಯದ ಹರವಿದೆ. ಶರಾವತಿಯ ತೀರದಲ್ಲಿ ಅನೇಕರ ಜೀವನದ ಕಥೆ ಅರಳುತ್ತದೆ. ಕಾವ್ಯವನ್ನೋದುವ ಸಹೃದಯನ ದೃಷ್ಟಿಯಲ್ಲಿ ಅದೊಂದು ಜಲರೂಪಿ ವ್ಯಕ್ತಿಯಂತೆ ಕಾಣುವುದು. ಶರಾವತಿ ಬರಿಯ ನದಿಯಲ್ಲ. ಕಾವ್ಯದ ಕಥಾ ಸಮಸ್ತಕ್ಕೂ ಇದರ ತಟ ಅಧ್ಯಕ್ಷತೆ ವಹಿಸುತ್ತದೆ. ಕೈಲಾಸೇಶ್ವರನಿಗೆ ಮೆಚ್ಚಿಕೆಯಾಗಿ ನೆಲೆನಿಂತ ವನ್ಯಪರಿಸರವಿದು. ವಿಷ್ಣುವಿನ ಮನಸ್ಸಿಗೆ ಬಂದ ಪುಣ್ಯಭೂಮಿ. ಈ ನದಿಯ ಸುಂದರ ತೀರದಲ್ಲಿ ಶ್ರೀರಾಮ ಸ್ವಲ್ಪ ಕಾಲ ವಾಸವಾಗಿದ್ದ. ರಾವಣ ಸಂಹಾರದ ಅನಂತರ ಲಿಂಗನಮಕ್ಕಿಯಲ್ಲಿ ರಾಮನಿಂದ ಶಿವಲಿಂಗ ಸ್ಥಾಪನೆ. ಈ ಪುಣ್ಯಲಿಂಗಾರ್ಚನೆಯಿಂದ ಪದಮುಖನೆಂಬ ನೀಚನಿಗೂ ಶಿವಸಾಯುಜ್ಯ ಪ್ರಾಪ್ತಿ. ವಿಧೂಮನ ಕಾಮದ ಕಲ್ಮಷವಿರೇಚನಕ್ಕೆ ಅಗ್ನಿಕುಂಡವೇರ್ಪಡುವುದು ಈ ನದಿಯ ಸಾನ್ನಿಧ್ಯದಲ್ಲಿ. ಶಾಪಗ್ರಸ್ತ ಸಹಸ್ರಾನೀಕನಿಗೆ ಶಾಪವಿಮೋಚನೆ ಈ ಪುಣ್ಯಜಲದಲ್ಲಿ. ಅಹಂಕಾರದಿಂದ ಮೆರೆಯುತ್ತಿದ್ದ ಉದಯನಿಗೆ ಸಾರೂಪ್ಯ ದೊರೆಯುವುದು ಈ ನದಿಯ ದಡದಲ್ಲಿ. ಅರಿಷಡ್ವರ್ಗದ ಮೋಹಕ್ಕೆ ಒಳಗಾಗಿ ಕಷ್ಟದಿಂದ ಬಳಲುತ್ತಿರುವ ವ್ಯಕ್ತಿಗಳ ಉದ್ಧಾರ ಈ ನದೀತೀರದಲ್ಲಿನ ರಾಮೇಶ್ವರನ ಸಾನ್ನಿಧ್ಯದಲ್ಲಿ. ದೇವಲೋಕದ ವರೆಗೂ ಇದರ ಪುಣ್ಯದ ಕೀರ್ತಿಯ ಬಿತ್ತರ. ಹೀಗಾಗಿ ಇದು ಬರಿಯ ನದೀತೀರವಲ್ಲ. ನದಿಯೂ ಅಲ್ಲ. ಪ್ರಾಪಂಚಿಕ ಸುಖದುಃಖಗಳ ಅನುಭವವನ್ನುಂಟುಮಾಡುವ ರಂಗಪ್ರಾಂಗಣ. ಇಲ್ಲಿಯ ಕಿರುಗತೆಗಳೆಲ್ಲ ಒಂದುಗೂಡಿ ಕಾವ್ಯಕ್ಕೆ ಏಕಘಟತೆಯನ್ನಿತ್ತಿವೆ. ಆದರೆ 'ಶರಾವತಿ'ಯನ್ನು ಸಾಂಕೇತಿಕ ನೆಲೆಯಲ್ಲಿ ದುಡಿಸಿಕೊಳ್ಳುವ ಅವಕಾಶವಿದ್ದೂ ಸೃಜನಶೀಲತೆಯಲ್ಲಿಯ ಕೊರತೆಯಿಂದಾಗಿ ಸುಬ್ರಹ್ಮಣ್ಯ ಸೋಲನುಭವಿಸುವನು. ಎಲ್ಲ ಕಥೆಗಳೂ ರಾಮೇಶ್ವರನ ಸನ್ನಿಧಿಯಲ್ಲಿ ಕೊನೆಗೊಳ್ಳುವುವು. ಏಕಕೇಂದ್ರದತ್ತ ಎಲ್ಲ ಕಥೆಗಳು ಚಲಿಸುತ್ತವೆ. ಇದರಿಂದಾಗಿ ಕಾವ್ಯಕ್ಕೊಂದು ನಿರ್ದಿಷ್ಟವಾದ ಚೌಕಟ್ಟು ಪ್ರಾಪ್ತವಾಗಿದೆ.

ಒಟ್ಟಿನಲ್ಲಿ ಹರಿಹರರ ಕಥೆಯನ್ನು, ನರಸಿಂಹಸ್ವಾಮಿಯ ಕೃಪೆಯಿಂದ ಹೇಳಹೊರಟರೂ ಲಕ್ಷ್ಮೀಶನಿಂದ ಭಾವ, ಪದ, ವಾಕ್ಯ, ಘಟನೆ, ನುಡಿಗಟ್ಟು ಶೈಲಿಯನ್ನು ಪಡೆದು ತನ್ನ ಕಾವ್ಯದಲ್ಲಿ ಅಳವಡಿಸಿರುವನು. ಎಷ್ಟೋ ಪದ್ಯಗಳನ್ನು ಲಕ್ಷ್ಮೀಶನಿಂದ ಎತ್ತಿ ತನ್ನ ಕಿಸೆಯಿಂದ ಚಲಾವಣೆಗೆ ತಂದ ನಾಣ್ಯದಂತೆ ಬಳಸುವನು. ಸುಬ್ರಹ್ಮಣ್ಯನ

ಸ್ವೋಪಜ್ಞ ಪ್ರತಿಭೆ ಸೃಜನಶೀಲ ಅಭಿವ್ಯಕ್ತಿಯನ್ನು ಪಡೆದದ್ದು ತೀರಾ ಕಡಮೆ. ಇದಕ್ಕೆ ಕಾರಣ ಆತ ಲಕ್ಷ್ಮೀಶನ ಕಾವ್ಯದಲ್ಲಿನ ರಾಮಾಯಣದ ಕಥೆಯನ್ನು ಮೊದಲರ್ಧಕ್ಕೆ ಮೂಲ ಆಕರವಾಗಿ ಬಳಸಿದ್ದು, ಉತ್ತರಾರ್ಧಕ್ಕೆ ಪುರಾಣದ ಕಥೆಯನ್ನಿಟ್ಟುಕೊಂಡರೂ ಲಕ್ಷ್ಮೀಶನ ಶೈಲಿ, ಪದ್ಯ, ನುಡಿಗಟ್ಟನ್ನು ಅನುಕರಿಸಿ, ಹೊಸ ಕಥೆಗೆ ಸ್ವಂತ ಅಸ್ತಿತ್ವ ನೀಡುವಲ್ಲಿ ವಿಫಲನಾದದ್ದು. ಹೀಗಾಗಿ ಸುಬ್ರಹ್ಮಣ್ಯ ಲಕ್ಷ್ಮೀಶನ ದಟ್ಟನೆರಳಿನಲ್ಲಿ ನಿಲ್ಲುವುದು ಅನಿವಾರ್ಯವಾಗಿದೆ, ಕಾವ್ಯವನ್ನು ಸಂಪೂರ್ಣವಾಗಿ ಗಮನಿಸಿದಾಗ ಸುಬ್ರಹ್ಮಣ್ಯನ ಋಣಭಾರ ತುಸು ಹೆಚ್ಚಾಯಿತು ಎನಿಸುತ್ತದೆ. ಏನೇ ಇರಲಿ, ಲಕ್ಷ್ಮೀಶ ತನ್ನ ಮುಂದಿನವರ ಮೇಲೆ ಭಾಷೆ, ಶೈಲಿ, ಹಾಗೂ ವಸ್ತುವಿನ ದೃಷ್ಟಿಯಿಂದ ತಕ್ಕಮಟ್ಟಿಗಾದರೂ ಪ್ರಭಾವ ಬೀರಿದನೆನ್ನುವುದು ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಮಹತ್ವದ ಅಂಶ. ಇದು ಜೈಮಿನಿ ಭಾರತ ಜನಸಾಮಾನ್ಯರಲ್ಲಿ ಪಡೆದುಕೊಂಡ ಜನಪ್ರಿಯತೆಗೆ ಸಾಕ್ಷಿ.

---

# “ಭಾಗವತ” ತಿಮ್ಮಯ್ಯನ ಶಿಲ್ಪ ಮತ್ತು ಪುರಂದರದಾಸರ ಮೂರ್ತಿಕಲ್ಪನೆ

ಡಾ|| ಎಂ. ಚಿದಾನಂದಮೂರ್ತಿ

ಹೊಸಪೇಟೆಯ ಬಳಿಯ ತುಂಗಭದ್ರಾ ಜಲಾಶಯವು ನಿರ್ಮಾಣವಾದಾಗ ಅದರ ನೀರಿನಡಿ ಮುಳುಗಿಹೋದ ನಾರಾಯಣದೇವರ ಕೆರೆ ಎಂಬ ಹೆಸರಿನ ಊರಿನ ದೇವಾಲಯಗಳ ಬಿಡಿಭಾಗಗಳನ್ನು ಕಳಚಿ ಅವನ್ನು ಹೊಸಪೇಟೆ ತಾಲೂಕಿನ ಮರಿಯಮ್ಮನ ಹಳ್ಳಿಯಲ್ಲಿ ಜೋಡಿಸಿ ಆ ದೇವಾಲಯಗಳನ್ನು ಆದಷ್ಟು ಪುನಾರಚಿಸಲಾಗಿದೆ. ಹಾಗೆ ಜೋಡಿಸಿರುವ ದೇವಾಲಯಗಳಲ್ಲೆಲ್ಲ ಲಕ್ಷ್ಮೀನಾರಾಯಣ ದೇವಾಲಯವು ಸುಂದರವಾದುದು. ಶಿಲ್ಪದ ಆಧಾರದಿಂದ ಅದು ಹದಿನೈದು ಹದಿನಾರನೇ ಶತಮಾನದ ವಿಜಯನಗರ ಕಾಲದ ಕಟ್ಟಡವೆಂದು ಸುಲಭವಾಗಿ ನಿರ್ಧರಿಸಬಹುದು. ಆ ದೇವಾಲಯದ ಕಂಬವೊಂದರ ಮೇಲೆ ವಿಠ್ಠಲಸ್ವಾಮಿಯ ಮುಂದೆ ನಿಂತು ಹಾಡುತ್ತಿರುವ ಭಕ್ತನೊಬ್ಬನ ಶಿಲ್ಪವಿದೆ. (ಚಿತ್ರ 1). ಆ ಭಕ್ತನ ತಲೆಯ ಸಮೀಪ “ಭಾಗವತ ತಿಮಯ” ಎಂಬ ಹದಿನಾರನೇ ಶತಮಾನದ ಚಿಕ್ಕ ಶಾಸನವಿರುವುದರಿಂದ ಆ ಭಕ್ತನ ಹೆಸರು ತಿಮ್ಮಯ್ಯ ಎಂದೂ ಅವನೊಬ್ಬ “ಭಾಗವತ” ಸಂಪ್ರದಾಯದವನಾಗಿದ್ದನೆಂದೂ ಮತ್ತೆ ಹೇಳಬೇಕಾಗಿಲ್ಲ. ಇದೊಂದು ಅಪ್ರಕಟಿತ ಶಾಸನ ಮತ್ತು ಶಿಲ್ಪವನ್ನೂ ಯಾರೂ ಗಮನಿಸಿಲ್ಲ. ತಿಮ್ಮಯ್ಯ ಎಂಬ ಹೆಸರಿನ ಒಬ್ಬ ವಿಷ್ಣುಭಕ್ತನಾಗಲಿ ಹರಿದಾಸನಾಗಲಿ ವಿಜಯನಗರ ಕಾಲದಲ್ಲಿದ್ದುದು ಬೇರೆ ಮೂಲಗಳಿಂದ ತಿಳಿದುಬಂದಿಲ್ಲವಾಗಿರುವುದರಿಂದ ಈ ಶಾಸನ ಹರಿದಾಸರ ಮಾಲಿಕೆಗೆ ಒಂದು ಹೊಸ ಹೆಸರನ್ನು ಸೇರಿಸುತ್ತದೆ. ತಿಮ್ಮಯ್ಯನು ಮಾಧ್ವ ವೈಷ್ಣವನೋ ಭಾಗವತ ವೈಷ್ಣವನೋ ಸ್ಪಷ್ಟವಾಗಿ ಹೇಳಲಾಗುವುದಿಲ್ಲ.[1] (‘ಭಾಗವತ’ ಎಂಬ ವಿಶೇಷಣವು ಮಾಧ್ವ ವೈಷ್ಣವರನ್ನೂ ಸೂಚಿಸಬಹುದು, ಭಾಗವತ ವೈಷ್ಣವರನ್ನೂ ಸೂಚಿಸಬಹುದು.) ತಿಮ್ಮಯ್ಯನ ಯಾವುದೇ ವಾಗ್ಗೇಯ ಕೃತಿ ಇನ್ನೂ ದೊರಕಿಲ್ಲವಾದರೂ ಅವನು ಪಾಂಡುರಂಗ ವಿಠ್ಠಲನ ಭಕ್ತನಾಗಿದ್ದನೆಂಬುದು ಮಾತ್ರ ಸ್ಪಷ್ಟ.

ಕೃಷ್ಣದೇವರಾಯನ ಕಾಲದಲ್ಲಿದ್ದ ತಿಮ್ಮಣ್ಣ ಕವಿಯೂ ಭಾಗವತ ತಿಮ್ಮಯ್ಯನೂ ಒಬ್ಬನೇ ಎಂದು ಹೇಳಲು ಆಧಾರಗಳು ಸಾಲವು. ಕನಕದಾಸರಿಗೆ

---

1 ಮಾಧ್ವ ವೈಷ್ಣವರು ದ್ವೈತಿಗಳಾದರೆ ಭಾಗವತ ವೈಷ್ಣವರು ಅದ್ವೈತಿಗಳು. ಭಾಗವತ ವೈಷ್ಣವರು ಭಕ್ತಿ ಪ್ರಧಾನರು.



ಚಿತ್ರ 1: ಭಾಗವತ ತಿಮ್ಮಯ್ಯ ಮತ್ತು ವಿಠ್ಠಲ ದೇವರು



ಚಿತ್ರ 3: ತಾಳ್ಳಪಾಕ ಅನ್ನಮಾಚಾರ್ಯ



ಚಿತ್ರ 2: "ಪ್ರಚಲಿತವಿರುವ ಪುರಂದರದಾಸರ ಚಿತ್ರ"

ಅವರ ಪೂರ್ವಾಶ್ರಮದಲ್ಲಿ ತಿಮ್ಮಪ್ಪ ಎಂಬ ಹೆಸರಿದ್ದಿತೆಂದು ಹೇಳಲಾಗಿದೆಯಾದರೂ, ಅವರ ಆರಾಧ್ಯ ದೈವ ಕೇಶವ ಆದುದರಿಂದ ಕನಕದಾಸರೂ ಭಾಗವತ ತಿಮ್ಮಯ್ಯನೂ ಅಭಿನ್ನರೆಂದು ಹೇಳಲು ಹೆಚ್ಚಿನ ಆಧಾರಗಳು ಬೇಕು. ಹಲವಾರು ಕೀರ್ತನೆಗಳನ್ನು ಬರೆದಿರುವ ತಿಮ್ಮಪ್ಪದಾಸರು[2] (19ನೆ ಶ.) ಬೇರೆ ಎಂಬುದು ಸ್ಪಷ್ಟ. ಇದರಿಂದ, ಸದ್ಯಕ್ಕೆ ಭಾಗವತ ತಿಮ್ಮಯ್ಯನನ್ನು ನಮಗೆ ತಿಳಿದಿರುವ ಯಾರೇ ವ್ಯಕ್ತಿಯ ಜೊತೆ ಅಭಿಜ್ಞಿಸುವ (identify) ಪ್ರಯತ್ನವನ್ನು ಸದ್ಯಕ್ಕೆ ಕೈಬಿಡಬಹುದು.

ಭಾಗವತ ತಿಮ್ಮಯ್ಯ ಬಹುಶಃ ಪುರಂದರದಾಸರ ಸಮಕಾಲೀನ. ಇಬ್ಬರೂ ಹದಿನಾರನೇ ಶತಮಾನದವರು; ಇಬ್ಬರೂ ಹಂಪೆಯ ಪರಿಸರದಲ್ಲಿದ್ದವರು. ಪುರಂದರದಾಸರ ಪ್ರಚಲಿತ ಚಿತ್ರಗಳೆಲ್ಲ ಆಧುನಿಕ ಕಾಲಕ್ಕೆ ಸೇರಿದುವು. ಹಂಪೆಯ 'ಪುರಂದರ ಮಂಟಪ'ದ ಕಂಬದ ಮೇಲಿರುವ ವಿಗ್ರಹವೂ ಅಷ್ಟೇ.[3] ಹಂಪೆಯಲ್ಲಿ ಭೂಗತವಾಗಿದ್ದು ಕೆಲವು ವರ್ಷಗಳ ಹಿಂದೆ ಹೊರಕ್ಕೆ ತೆಗೆಯಲಾದ ಮತ್ತು ಪುರಂದರದಾಸರ ಶಿಲ್ಪವೆಂದು ಅತಿಪ್ರಚಾರವನ್ನು ಕೊಟ್ಟು ಜನ ಪೂಜಿಸುವಂತೆ ಮಾಡಿರುವ ವಿಗ್ರಹವು ನಿಶ್ಚಿತವಾಗಿಯೂ ಪುರಂದರದಾಸರದು ಅಲ್ಲವೆಂದೂ ಅದು ಶ್ರೀ ವೈಷ್ಣವ ಸಂಪ್ರದಾಯದ **ತಿರುತ್ತೊಂಡರಡಿಪ್ಪೊಡಿಯಾಳ್ವಾರರ** ವಿಗ್ರಹವೆಂದೂ ವಿದ್ವಾಂಸರು ಸಕಾರಣವಾಗಿ ಸಾಧಿಸಿದ್ದಾರೆ. (ತಿರುತ್ತೊಂಡರಡಿಪ್ಪೊಡಿಯಾಳ್ವಾರ್– ಭಗವಂತನ ಭಕ್ತರ ಪಾದದ ಧೂಳಿನವನು ನಾನು ಎಂದು ಆ ಆಳ್ವಾರ್ ಭಕ್ತ ಕರೆದು ಕೊಂಡಿದ್ದಾನೆ.) ಪುರಂದರದಾಸರ ಚಿತ್ರಗಳೆಲ್ಲ ಕಲಾವಿದರು ಕಲ್ಪಿಸಿದ್ದು. ಹದಿನಾರನೇ ಶತಮಾನದ ಭಾಗವತ ತಿಮ್ಮಯ್ಯನ ಮೂರ್ತಿಯು ಅಂದಿನ ಕಾಲದ ಹರಿದಾಸರ ವೇಷ ಭೂಷಣ ಮುಂತಾದವುಗಳ ಬಗ್ಗೆ ಸ್ಪಷ್ಟ ಮಾಹಿತಿಯನ್ನು ಒದಗಿಸುತ್ತದೆ. ತಿಮ್ಮಯ್ಯ ಮೊಳಕಾಲ ವರೆಗೆ ಪಂಚೆ ಉಟ್ಟಿದ್ದಾನೆ. ಕಾಲಲ್ಲಿ ಗೆಜ್ಜೆಗಳು ಕಾಣಿಸುತ್ತಿಲ್ಲ. ಕೈಯಲ್ಲಿ ದಪ್ಪನೆಯ ಬಳೆಗಳಿವೆ. ಕಿವಿಯಲ್ಲಿ ಉಂಗುರಾಕಾರದ ಒಡವೆ ಇದ್ದಂತಿದೆ. ತಲೆಯ ಕೂದಲನ್ನು ಎತ್ತಿ ಮುಡಿಯಂತೆ ಕಟ್ಟಿದ್ದಾನೆ. ವಿಶೇಷವಾಗಿ ಗಮನಿಸ ಬೇಕಾದ ಅಂಶಗಳೆಂದರೆ ಎಡಗೈಯಲ್ಲಿ ಹಿಡಿದಿರುವ ಚಿಟಕಿ ಮತ್ತು ಬಲಗೈಯಲ್ಲಿ ಹಿಡಿದಿರುವ ತಂತೀವಾದ್ಯ. ಚಿಟಕಿ ಸ್ಪಷ್ಟವಾಗಿ ಕಾಣುವುದಿಲ್ಲ. ಆದರೆ ಬಲಗೈಯಲ್ಲಿ ಹಿಡಿದಿರುವ ತಂತೀವಾದ್ಯವು ವಿಶೇಷವಾದುದು. ಅದು ಇಂದಿನ ತಂಬೂರಿಯಂತಿಲ್ಲ. ಆ ವಾದ್ಯದ ಸೋರೆ ಬುರುಡೆಯು ದಂಡದ ಮೇಲ್ಭಾಗದಲ್ಲಿದೆ, ಮತ್ತು ಅದು

---

2 ಇವರ ಕೀರ್ತನೆಗಳನ್ನು 'ಅರ್ಚನ' ಎಂಬ ಹೆಸರಿನಲ್ಲಿ ಎಂ. ವಿ. ಸೀತಾರಾಮಯ್ಯನವರು ಸಂಪಾದಿಸಿದ್ದಾರೆ. (ಪ್ರ. ಬೆಂಗಳೂರು ವಿಶ್ವವಿದ್ಯಾಲಯ)

3 ಆ ಮಂಟಪದ ಕಂಬದಲ್ಲಿ ವಿಗ್ರಹವನ್ನು ಕೆತ್ತುವುದಕ್ಕೆ ಮುಂಚಿನ ಖಾಲಿ ಕಂಬದ ಚಿತ್ರ ವನ್ನು ಶ್ರೀ ಆರ್. ಎಸ್. ಪಂಚಮುಖಿಯವರು ತಮ್ಮ 'ಹರಿದಾಸ ಸಾಹಿತ್ಯ' ಕೃತಿಯಲ್ಲಿ (ಪು. 59) ಪ್ರಕಟಿಸಿದ್ದಾರೆ.

ಗಾಯಕನ ಭುಜದ ಮೇಲೆ ಕುಳಿತಿದೆ. ಈಗ ಪ್ರಚಲಿತವಿರುವ ಪುರಂದರದಾಸರ ಚಿತ್ರಗಳಲ್ಲಿ (ಚಿತ್ರ 2) ಅವರು ತಂಬೂರಿಯನ್ನು ದೇಹದ ಮೇಲೆ, ಹೊಟ್ಟೆಯ ಭಾಗದಲ್ಲಿ ಎಡದಿಂದ ಬಲಕ್ಕೆ ಓರೆಯಾಗಿ ಹಿಡಿದಿರುವಂತೆ ತೋರಿಸಿದೆ. ತಂಬೂರಿಯ ಬುರುಡೆಯು ದಂಡದ ಕೆಳಗಿದೆ. ಆದರೆ ಪುರಂದರದಾಸರು ಹಿಡಿದಿರುವ ತಂತೀವಾದ್ಯವನ್ನು ಭಾಗವತ ತಿಮ್ಮಯ್ಯನ ಕೈಲಿರುವ ತಂತೀ ವಾದ್ಯದಂತೆ ಚಿತ್ರಿಸುವುದು ಹೆಚ್ಚು ಇತಿಹಾಸಸಮ್ಮತವಾದುದು. ಇದೇ ಬಗೆಯ ತಂತೀವಾದ್ಯವನ್ನು ಹಿಡಿದಿರುವ ಗಾಯಕನೊಬ್ಬನ ಶಿಲ್ಪವು 16ನೇ ಶತಮಾನದ ಮೂಡಬಿದ್ರಿಯ ಬಸದಿಯಲ್ಲಿರುವುದನ್ನು ಪ್ರೊ॥ ಕ. ವೆಂ. ರಾಜಗೋಪಾಲ್ ನನ್ನ ಗಮನಕ್ಕೆ ತಂದಿದ್ದಾರೆ.

ಪುರಂದರದಾಸರ ಹಿರಿಯ ಸಮಕಾಲೀನರಾಗಿದ್ದ ತಾಳ್ಳಪಾಕ ಅನ್ನಮಾಚಾರ್ಯರು (ಕ್ರಿ.ಶ. 1408–1507) ಒಬ್ಬ ವಿಷ್ಣುಭಕ್ತರೂ ಜೊತೆಗೆ ಗೇಯಕಾರರೂ ಆಗಿದ್ದರು. ಅವರು ಪುರಂದರದಾಸರನ್ನು ಕಂಡಿದ್ದರೆಂದು ಅವರ ಮೊಮ್ಮಗ ಚಿನ್ನ ತಿರುವೇಂಗಳನಾಥನ ಹೇಳಿಕೆ ಇದೆ. ತಿರುಪತಿಯ ಬೆಟ್ಟದ ಮೇಲೆ ಶ್ರೀ ವೆಂಕಟೇಶ್ವರ ದೇವಾಲಯದಲ್ಲಿ ಅನ್ನಮಾಚಾರ್ಯರ ಸಂಕೀರ್ತನೆಗಳ ತಾಮ್ರಪಟಗಳಿಗಾಗಿ ಒಂದು ಭಂಡಾರವನ್ನೇ ಕಟ್ಟಿಸಿ ಅದರ ಬಾಗಿಲಲ್ಲಿ ಅನ್ನಮಾಚಾರ್ಯ ಮತ್ತು ಅವರ ಮಗ ಪೆದ್ದ ತಿರುಮಲಾಚಾರ್ಯನ ವಿಗ್ರಹಗಳನ್ನು ಬಹು ಹಿಂದೆಯೇ ಕೆತ್ತಿಸಿ ನಿಲ್ಲಿಸಲಾಗಿದೆ. ಆ ಇಬ್ಬರು ಗೇಯಕಾರರ ಮೂರ್ತಿಗಳು ಭಾಗವತ ತಿಮ್ಮಯ್ಯನು ನುಡಿಸುತ್ತಿರುವ ತಂತೀವಾದ್ಯವನ್ನು ಸಂಪೂರ್ಣವಾಗಿ ಹೋಲುವ ವಾದ್ಯವನ್ನು ಕೈಯಲ್ಲಿ ಹಿಡಿದಿವೆ (ಚಿತ್ರ 3). ಆ ವಾದ್ಯಗಳಲ್ಲಿ ಸೋರೆ ಬುರುಡೆಯು ಗಾಯಕರ ಭುಜದ ಮೇಲಿದೆ. ಹದಿನೈದು ಹದಿನಾರನೇ ಶತಮಾನಗಳಲ್ಲಿ ಕರ್ನಾಟಕ ಮತ್ತು ಆಂಧ್ರಗಳಲ್ಲಿ ವಿಷ್ಣುಭಕ್ತರು ನುಡಿಸುತ್ತಿದ್ದ ತಂತೀವಾದ್ಯವು ಒಂದೇ ಆಗಿತ್ತು,

ಆ ತಂತೀವಾದ್ಯವು ಇಂದಿನ ತಂಬೂರಿ ಅಲ್ಲ. ಪುರಂದರದಾಸರು ತಮ್ಮ ಆತ್ಮಚರಿತ್ರಾತ್ಮಕವಾದ ಕೀರ್ತನೆಯೊಂದರಲ್ಲಿ—

ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆ ಬಾಗಿ ನಾಚುತಲಿದ್ದೆ
ಹೆಂಡತಿ ಸಂತತಿ ಸಾವಿರವಾಗಲಿ
ದಂಡಿಗೆ ಬೆತ್ತ ಹಿಡಿಸಿದಳಯ್ಯ

ಎಂದು ಹೇಳಿಕೊಂಡಿದ್ದಾರೆ. ಬೆತ್ತವು ಸಂನ್ಯಾಸಿಗಳು ಸಂಚರಿಸುವಾಗ ಬಳಸುವ ಊರುಗೋಲು * ದಂಡಿಗೆಯು ಒಂದು ತಂತೀವಾದ್ಯ. ಪುರಂದರದಾಸರು

* ಸಂನ್ಯಾಸಿಗಳಲ್ಲಿ ಏಕದಂಡಿ, ತ್ರಿದಂಡಿ ಸಂನ್ಯಾಸಿಗಳೆಂಬ ಭೇದಗಳುಂಟು. ಮೂರು ದಂಡಿಗಳನ್ನು ಒಟ್ಟುಗೂಡಿಸಿ ಕಟ್ಟಿರುತ್ತದೆ. ಈ ದಂಡಿಯನ್ನು ಧರಿಸಿಕೊಂಡಿರುತ್ತಾರೆ ಸಂನ್ಯಾಸಿಗಳು—ತಿರುಗಾಡುವಾಗ ಕೂಡ. ಈ ದಂಡಿ 'ಊರುಗೋಲು' ಅಲ್ಲ.—(ಸಂ.)

ಹಿಡಿದುಕೊಂಡು ನುಡಿಸುತ್ತಿದ್ದ ತಂತೀವಾದ್ಯವನ್ನು ದಂಡಿಗೆಯೆಂದು ಕರೆಯುತ್ತಿದ್ದರು. ದಂಡಿಗೆಯ ಉಲ್ಲೇಖ ಹಲವೆಡೆ ಬರುತ್ತದೆ. ತಂಬೂರಿ ವಾದ್ಯವನ್ನು ಪುರಂದರ ದಾಸರು ಹೆಸರಿಸಿದ್ದಾರೆಯೆಂಬುದು ನಿಜವಾದರೂ.[4] 'ದಂಡಿಗೆ'ಯೇ ಬೇರೆ, 'ತಂಬೂರಿ'ಯೇ ಬೇರೆಯೆಂಬುದು ವಿಜಯದಾಸರ ಹೇಳಿಕೆಯೊಂದರಿಂದ ಸ್ಪಷ್ಟವಾಗುತ್ತದೆ. ಅವರು ತಮ್ಮ ಕೀರ್ತನೆಯೊಂದರಲ್ಲಿ ಅವೆರಡನ್ನೂ ಬೇರೆಯಾಗಿ ಹೆಸರಿಸಿದ್ದಾರೆ.[5] ಆದ್ದರಿಂದ ಪುರಂದರದಾಸರ ಚಿತ್ರದ ಕೈಯಲ್ಲಿರಬೇಕಾದುದು 'ದಂಡಿಗೆ'ಯೇ ಹೊರತು ತಂಬೂರಿ ಅಲ್ಲ. ಬಸವಣ್ಣನವರು ತಮ್ಮ ವಚನವೊಂದರಲ್ಲಿ ಮನುಷ್ಯನ ದೇಹ ಮತ್ತು ದಂಡಿಗೆಗಳನ್ನು ಸಮೀಕರಿಸಿದ್ದಾರೆ.

ಎನ್ನ ಕಾಯವ ದಂಡಿಗೆಯ ಮಾಡಯ್ಯ
ಎನ್ನ ಶಿರವ ಸೋರೆಯ ಮಾಡಯ್ಯ
ಎನ್ನ ನರವ ತಂತಿಯ ಮಾಡಯ್ಯ
ಎನ್ನ ಬೆರಳ ಕಡ್ಡಿಯ ಮಾಡಯ್ಯ, ಬತ್ತೀಸರಾಗವ ಹಾಡಯ್ಯ
ಉರದಲೊತ್ತಿ ಬಾರಿಸು ಕೂಡಲಸಂಗಮ ದೇವಾ

'ಸೋರೆ'ಯು ದಂಡಿಗೆಯ ಮೇಲ್ಭಾಗದಲ್ಲಿರುತ್ತದೆಯೆಂಬ ಸೂಚನೆ ಮೇಲಿನ ವಚನದಲ್ಲಿದೆ. ಅಂತಹುದೇ ಸೂಚನೆ ನೇಮಿಚಂದ್ರನ ನೇಮಿನಾಥಪುರಾಣದಲ್ಲಿದೆ. (6:17 ವಚನ). ತಂಬೂರಿಯಂತೆ ಕೇವಲ ಶ್ರುತಿಗಾಗಿ ಬಳಸುವ ವಾದ್ಯ ಅದಾಗಿರಲಿಲ್ಲ. ವೀಣೆಯಂತೆ ಬೇರೆಬೇರೆ ತಾನ ಲಯಗಳನ್ನು ಹೊರಡಿಸುವ ವಾದ್ಯ ಅದಾಗಿತ್ತು ಎಂಬುದಕ್ಕೆ "ಬಸವಪುರಾಣ"ದ ಒಂದು ಹೇಳಿಕೆ 18:6 ಆಧಾರವಾಗಿದೆ. ವಚನಕಾರ ಸಕಲೇಶ ಮಾದರಸನು ಶ್ರೇಷ್ಠವಾದಕನೂ ಆಗಿದ್ದನು. ಆವನು "ಬತ್ತೀಸಾದಿ ರಾಗ"ಗಳಿಗಾಗಿಯೇ ಹಲವು ಬಗೆಯ "ದಂಡಿಗೆ"ಗಳನ್ನು ರಚಿಸಿದ್ದನೆಂದು ಭೀಮಕವಿಯು ಹೇಳುತ್ತಾನೆ. ರಾವಣವೀಣೆ. ವಾರಣಹಸ್ತ, ಗೌರೀವೀಣೆ, ಕಿನ್ನರವೀಣೆ, ಕಚ್ಛಪ-ವೀಣೆ ಇವು ಆ ದಂಡಿಗೆಗಳಲ್ಲಿ ಕೆಲವು. (ಬಸವಪುರಾಣ. 18: 7-8). ದಂಡಿಗೆಯ ರಚನೆ, ನಾದವೇ ಬೇರೆ; ತಂಬೂರಿಯ ರಚನೆ, ನಾದವೇ ಬೇರೆಯೆಂಬುದು ಸ್ಪಷ್ಟವಾಗಿದೆ.

ಈ ಹಿನ್ನೆಲೆಯಲ್ಲಿ, ಭಾಗವತ ತಿಮ್ಮಯ್ಯ ಮತ್ತು ಆನ್ನಮಾಚಾರ್ಯರ ಕೈಯ ತಂತೀವಾದ್ಯಗಳನ್ನು "ದಂಡಿಗೆ" ಎಂದು ಕರೆಯಲು ಅಡ್ಡಿಯಿಲ್ಲ. ಪುರಂದರರ ಕೈಯಲ್ಲಿರಬೇಕಾದುದು 'ದಂಡಿಗೆ'ಯೇ ಹೊರತು, ತಂಬೂರಿ ಅಲ್ಲ.

ಭಾಗವತ ತಿಮ್ಮಯ್ಯನ ಶಿಲ್ಪವಿರುವ ಕಂಬವನ್ನು ಮರಿಯಮ್ಮನಹಳ್ಳಿಯ ಜನರು 'ಪುರಂದರದಾಸರ ಕಂಬ'ವೆಂದು ಕರೆಯುವುದು ಸ್ವಾರಸ್ಯವಾಗಿದೆ.

---

4 ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು. ಸಂಪುಟ 3. ಪು. 3216. "ತಂಬೂರಿ ಮೊದಲಾದ ಅಖಿಲ ವಾದ್ಯಗಳಿದ್ದು....ಹರಿ ಸಂಬಲಾಜಿ ಈ ಡಂಭಕದ ಕೂಗಾಟ". ಈ ನಿಘಂಟಿನ ಪ್ರಕಾರ, ಪುರಂದರದಾಸರ ಈ 'ತಂಬೂರಿ'ಯ ಉಲ್ಲೇಖವೇ ಅತ್ಯಂತ ಪ್ರಾಚೀನ ಪ್ರಯೋಗ.

5 ಅದೇ. ಸಂಪುಟ 4. ಪು. 3764

# ‘ಅಜಿತಪುರಾಣ’ದ ಒಂದು ಪದ್ಯಪಾಠ ವಿಚಾರ

—ಡಾ॥ ಟಿ. ವಿ. ವೆಂಕಟಾಚಲ ಶಾಸ್ತ್ರೀ

**ಈ** ವರೆಗೆ ರನ್ನನ ‘ಅಜಿತ ತೀರ್ಥಕರ ಪುರಾಣ ತಿಲಕ’ದ ಮೂರು ಪರಿಷ್ಕರಣಗಳು ಬಂದಿದ್ದು (ಸಂ. ಮಂ. ಆ. ರಾಮಾನುಜಯ್ಯಂಗಾರ್ಯ, ೧೯೧೦ ; ಸಂ. ಎಚ್. ದೇವೀರಪ್ಪ, ದೇ. ಜವರೇಗೌಡ, ೧೯೫೫; ಸಂ. ಬಿ. ಎಸ್. ಸಣ್ಣಯ್ಯ. ರಾಮೇಗೌಡ, ೧೯೮೬), ಈ ಮೂರರಲ್ಲಿಯೂ ಬಹುವಾಗಿ ಪಾಠ ಸಮಸ್ಯೆಗಳೂ ಪಾಠ ದೋಷಗಳೂ ಇರುವುದನ್ನು ಅಭ್ಯಾಸಿಗಳೆಲ್ಲರೂ ಬಲ್ಲವರಾಗಿದ್ದಾರೆ. ಇವುಗಳಲ್ಲಿ ಹಲವನ್ನು ಸುಲಭವಾಗಿ ಗುರುತಿಸಿ ನೇರ್ಪಡಿಸಬಹುದು; ಆದರೆ ಕೆಲವು ಪಾಠ ಸಮಸ್ಯೆಗಳ ಪರಿಹಾರಕ್ಕೆ ಹೆಚ್ಚಿನ ಆಧಾರಸಾಮಗ್ರಿಗಳ ಅವಲಂಬನವೂ ವಿಚಾರವೂ ಅವಶ್ಯ. ಪ್ರಸ್ತುತ, ಒಂದು ಪದ್ಯದ (೧–೪೪) ಪಾಠ ಮತ್ತು ಅರ್ಥಗಳ ಚರ್ಚೆಯಷ್ಟೇ ಈ ಟಿಪ್ಪಣಿಯ ಉದ್ದೇಶ.

ಮೊದಲ ಪರಿಷ್ಕರಣದಲ್ಲಿ ಈ ಪದ್ಯ ಹೀಗಿದೆ :

ಕಳಕುಳಮಾಗೆ ಪಂಚಲನ ಬಲ್ಪಡೆ ಪಂಚಲನಶ್ವಸಂಕುಲಂ
ಕಳಕುಳಮಾಗೆ ಪಂಚಲನ ದಂತಿಘಟಾವಳಿ ಯುದ್ಧರಂಗದೊಳ್
ಕಳಕುಳಮಾಗೆ ಗಾತ್ರಕರದಂತಿ ವಿಘಾತದೊಳುಗ್ರದಂತಿಮು
ಕ್ಕಳಕರುಮಾಗರಂ ಪರಿದುದುದ್ಭಟನಿಂ ಸುಭಟತ್ರಿಣೇತ್ರನಿಂ ॥

ಎರಡನೆಯ ಪರಿಷ್ಕರಣದಲ್ಲಿ ‘ಬಲ್ಪಡೆ’ ‘ಬಲ್ವಡೆ’ ಎಂದಾಗಿದೆ: ‘ಸುಭಟ’ ಎಂಬುದಕ್ಕೆ ‘ಕದನ’ ಎಂಬ ಪಾಠಭೇದವನ್ನು ತೋರಿಸಿದೆ. ಮೂರನೆಯ ಪರಿಷ್ಕರಣದಲ್ಲಿ, ಮೂರನೆಯ ಪಾದದಲ್ಲಿ ಕೊನೆಗೆ ಪದಚ್ಛೇದದ ಒಂದು ಸಣ್ಣ ಮಾರ್ಪಾಡು ಹೊರತು ಪದ್ಯಪಾಠ ಎರಡರಲ್ಲಿರುವಂತೆಯೇ ಇದೆ: ಹೆಚ್ಚು ಪಾಠಭೇದಗಳನ್ನು ಗುರುತಿಸಿದೆ. ಆದರೆ ಈ ಪಾಠಭೇದಗಳು ಗಮನಾರ್ಹವಾದವಲ್ಲ ಎಂಬುದನ್ನು ಸುಲಭವಾಗಿ ತಿಳಿಯಬಹುದು.

ಪ್ರಸ್ತುತ, ಈ ಪದ್ಯದಲ್ಲಿ ಆಹವಮಲ್ಲ ತೈಲಪನ ಮಹಾಮಂತ್ರಿಯಾದ ದಲ್ಲಪನ ಮಗನೂ ಅತ್ತಿಮಬ್ಬೆ ಗುಂಡಮಬ್ಬೆಯರ ಪತಿಯೂ ಚಾಲುಕ್ಯ ಚಮೂಪತಿಯೂ ಆದ ನಾಗದೇವನು ಪಂಚಲನೆಂಬ ಒಬ್ಬ ಶತ್ರುಪಕ್ಷದ ಯೋಧನೊಂದಿಗೆ ಹೋರಾಡಿದ ಸಂದರ್ಭದ ವರ್ಣನೆಯಿದೆ. ಈ ಪಂಚಲನು, ಗಂಗ ಮಾರಸಿಂಹನ ತರುವಾಯದಲ್ಲಿ ಗಂಗರಾಜ್ಯವನ್ನಾಳಿದ (ಸು. ೯೭೪-೮೫) ಪಾಂಚಾಲದೇವನೆಂದೂ

ಇವನನ್ನು ತೈಲಪನು ಶಿವಮೊಗ್ಗ ಜಿಲ್ಲೆಯ ಸಿರಿಪೂರಿನಲ್ಲಿ ಬೀಡುಬಿಟ್ಟಿದ್ದಾಗ (ಸು. ೯೭೩) ಯುದ್ಧರಂಗದಲ್ಲಿ ಶಿರಚ್ಛೇದನಮಾಡಿ ಕೊಂದನೆಂದೂ ತಿಳಿಯಲಾಗಿದೆ. ಗದಾಯುದ್ಧದಲ್ಲಿ ತೈಲಪನನ್ನು ಕೀರ್ತಿಸುವಲ್ಲಿ "ಪಾಂಚಾಲ ಮದೇಭಪಂಚಾನನಂ" ಎಂದೂ (೨-೭ ವ.), ಅವನ ಸಾಧನೆಗಳನ್ನು ಕ್ರೋಡೀಕರಿಸುತ್ತ ಆರನೆಯ ವಿಕ್ರಮಾದಿತ್ಯನ ಒಂದು ಶಾಸನದಲ್ಲಿ "ದೋರ್ಗರ್ವದಗುರ್ವಿಂ ಯುದ್ಧದೊಳ್ ಪಂಚಲನ ತಲೆಯುಮಂ ಕೊಂಡು" ಎಂದೂ ಬಂದಿರುವ ಉಲ್ಲೇಖಗಳನ್ನು ಇಲ್ಲಿ ನೆನೆಯಬಹುದಾಗಿದೆ. ಪಂಚಲನ ಪ್ರಾಣಕ್ಕೆ ಮುಳುವಾದ ಈ ಯುದ್ಧದಲ್ಲೇ ತೈಲಪನ ಪರವಾಗಿ ಹೋರಾಡಿದ ನಾಗದೇವನು, ಸುಭಟ ತ್ರಿಣೇತ್ರನೆನಿಸಿದವನು, ಪಂಚಲನ ಪದಾತಿ ಸೇನೆಯೂ ಗಜಾಶ್ವಸೇನೆಯೂ ಅಸ್ತವ್ಯಸ್ತಗೊಳ್ಳುವಂತೆ ಕಾದಿದನೆಂದು ತೋರುತ್ತದೆ; ಇಲ್ಲವೆ ಆ ಶತ್ರುವೀರನ ಮೇಲೆ ನಡೆದ ಇನ್ನೊಂದು ಯುದ್ಧದಲ್ಲಿ ನಾಗದೇವನು ತನ್ನ ಸಾಹಸವನ್ನು ಹೀಗೆ ಮೆರೆದಿರಬಹುದು. ಇದು ಏನಿದ್ದರೂ, ಅಜಿಪು.,ದ ಉದ್ಧೃತ ಪದ್ಯದಲ್ಲಿ, ಅದರ ಕೊನೆಯೆರಡು ಪಾದಗಳಲ್ಲಿ ಸ್ವಲ್ಪಮಟ್ಟಿಗೆ ಪಾಠಸಮಸ್ಯೆಯೂ ಅರ್ಥಕ್ಲೇಶವೂ ಇರುವುದು ವಿದಿತ. ೧೯೭೮ರ ಪರಿಷ್ಕರಣದ ಟಿಪ್ಪಣಿಗಳಲ್ಲಿ "ಮಕ್ಕಳ ಕರುವಾಗರ-?" ಎಂಬುದಾಗಿ ತೋರಿಸುವುದರಿಂದಲೂ ಇದು ಸ್ಪಷ್ಟ.

ಈಗ ಈ ಅಲ್ಪವ್ಯತ್ಯಾಸದೊಂದಿಗೆ ಪದ್ಯವನ್ನು ಪರಿಷ್ಕರಿಸಿ ಹೀಗೆ ಬರೆಯಬಹುದು :

ಕಳಕುಳಮಾಗೆ ಪಂಚಲನ ಬಲ್ವಡೆ ಪಂಚಲನಶ್ವಸಂಕುಲಂ  
ಕಳಕುಳಮಾಗೆ ಪಂಚಲನ ದಂತಿಘಟಾವಳಿ ಯುದ್ಧರಂಗದೊಳ್  
ಕಳಕುಳಮಾಗೆ ಗಾತ್ರಕರದಂ[ತ] ವಿಘಾತದೊಳುಗ್ರದಂತಿ ಮ  
ಕ್ಕಳ ಕ[ಜು]ವಾ[ಸು]ರಂ ಪರಿದುದುದ್ಭಟನಿಂ ಸುಭಟತ್ರಿಣೇತ್ರನಿಂ ॥

ಈಗ ಪದ್ಯದ ಆಶಯ ಹೀಗೆ: "ಪಂಚಲನ ಬಲಶಾಲಿಯಾದ ಪದಾತಿ ಸೈನ್ಯ ಅಸ್ತವ್ಯಸ್ತವಾಗಲು, ಪಂಚಲನ ಕುದುರೆಗಳ ಸಮೂಹ ಅಸ್ತವ್ಯಸ್ತವಾಗಲು, ಪಂಚಲನ ಆನೆಗಳ ಹಿಂಡು ಯುದ್ಧರಂಗದಲ್ಲಿ ಅಸ್ತವ್ಯಸ್ತವಾಗಲು, (ನಾಗದೇವನ) ಕೆರಳಿದ ಆನೆ 'ಮಕ್ಕಳ ಕರು'. ಆ ಮಹೋನ್ನತನ ಕಡೆಯಿಂದ. ಸುಭಟತ್ರಿಣೇತ್ರನ ಕಡೆಯಿಂದ, ಮುಂಗಾಲು, ಸೊಂಡಿಲು, ದಂತಗಳ ಮೂಲಕ ಕೊಲ್ಲುತ್ತ ಭಯಂಕರವಾಗಿ ನುಗ್ಗಿತು."

ಈ ಪದ್ಯಪಾಠದ ಮತ್ತು ಆಶಯದ ಸಮರ್ಥನೆ ಹೇಗೆ? ನಾಗದೇವನು ಏರಿದ್ದ ಆನೆಗೆ 'ಮಕ್ಕಳ ಕಜು' ಎಂದು ಹೆಸರಿತ್ತೆಂದು ತಿಳಿಯಲು ನಮಗೆ ಆಧಾರಗಳಿಲ್ಲ ಎಂಬುದು ನಿಜ. ಆದರೆ ತಮ್ಮ ನೆಚ್ಚಿನ ಆನೆ ಕುದುರೆಗಳಿಗೆ ಹೀಗೆ ತಮಗೆ ಇಷ್ಟವಾದ ಹೆಸರುಗಳನ್ನು ಕೊಡುತ್ತಿದ್ದುದು ಸಾಹಿತ್ಯಕ ಆಧಾರಗಳಿಂದ

ನಮಗೆ ತಿಳಿದಿದೆ. ಉದಾ.ಗೆ ಮುಮ್ಮಡಿ ಕೃಷ್ಣನ ಅತಕೂರು ಶಾಸನದಲ್ಲಿ "ಸಿಂಗದಂತಿರೆ ಹರಿ ಬೀರಲಕ್ಷ್ಮಿ ನೆರವಾಗಿರೆ ಚೋಟನ ಕೋಟೆಯೆಂಬ ಸಿಂಧುರದ ಶಿರಾಗ್ರಮಂ ಬಿರಿಯೆ ಪೊಯ್ದಂ ಕದನೈಕಸೂದ್ರಕಂ" ಎಂಬ ಭಾಗವನ್ನು (ಎಕ., ೩-೧, ಮಂಡ್ಯ ೪೧, ಪು. ೧೩೬) ನೋಡಬಹುದು. ಇಲ್ಲಿ ಕುದುರೆಗೆ ವೀರಲಕ್ಷ್ಮಿ (>ಬೀರಲಕ್ಷ್ಮಿ)ಯೆಂದೂ ಆನೆಗೆ 'ಚೋಟನ ಕೋಟೆ'ಯೆಂದೂ ಹೆಸರಿದ್ದುದು ಸ್ಪಷ್ಟವಿದೆ. ಹೀಗೆಯೇ ನಾಗದೇವನ ಆನೆಯ ಹೆಸರು 'ಮಕ್ಕಳ ಕಜು'. ಈ ಹೆಸರಿನ ಔಚಿತ್ಯ ಸಾರ್ಥಕತೆಗಳು ಸಹೃದಯರು ಕಲ್ಪಿಸಿಕೊಂಡ ಹಾಗೆ ಇರುತ್ತವೆ. 'ಕಜು' ಹೊಸಗನ್ನಡದ ಕರುವೇ ; ಮಣಕ, ಪೋತ, ವತ್ಸ ಎಂದೇ ಅರ್ಥ. ತಾತ್ಪರ್ಯವಾಗಿ, 'ಮಕ್ಕಳ ಮುದ್ದು' ಎಂದು ತಿಳಿದರೂ ತಪ್ಪಲ್ಲ. ಇನ್ನು 'ಆಸುರಂ' ಪರಿಷ್ಕರಣ ವಿಚಾರ : ಸಕಾರಕ್ಕೆ ಗಕಾರವನ್ನು, ಗಕಾರಕ್ಕೆ ಸಕಾರವನ್ನು ಭ್ರಮಿಸಿ ಮಾಡುವ ಪ್ರತಿಕಾರ ಸ್ಖಾಲಿತ್ಯಗಳು ಸಾಮಾನ್ಯ (ನೋಡಿ : 'ಕನ್ನಡ ಗ್ರಂಥ ಸಂಪಾದನೆ', ಪು. ೮೨, ೯೧). ಕವಿಪಾಠ 'ಆಸುರಂ' ಕೆಟ್ಟು 'ಆಗರಂ' ಆಗಿದೆ. "ಆಸುರಂ ಪರಿದು" ಎಂಬಲ್ಲಿ 'ಆಸುರಂ' ಕ್ರಿಯಾವಿಶೇಷಣವಾಗಿ ಬಂದಿರುವ ಒಂದು ಅವ್ಯಯರೂಪ. "ಕೇಸರಿಯಾಸುರಂ ಮಸಗಿ ಕ್ಷುಧಾಗ್ನಿಯೊಡನೆ ಕೋಪಾಗ್ನಿ ಪೆರ್ಚೆ" ('ಕರ್ಣಾಟಕ ಪಂಚತಂತ್ರ", ಪು. ೯೦-ಸಾಲು ೧೧), "ಗುಹೆಯೊಳಗಿರ್ದ ಕೇಸರಿಯುನಾಸುರದಿಂ ವನದಂತಿ ಸೊರ್ಕಿ ಬಂದಹಪ ಕೆರಳ್ಚಿ ಜೀವಿಕುಮೇ" (ರಾಜಶೇಖರ ವಿಳಾಸ, ೬-೯೧) ಎಂಬಂತಹ ಪ್ರಯೋಗಗಳನ್ನು ಇದರೊಂದಿಗೆ ಹೋಲಿಸಿ ನೋಡಬಹುದು. ನಾಗದೇವನ ಆನೆ 'ಮಕ್ಕಳ ಕಜು', ಅವನು ಶತ್ರುಪಕ್ಷವನ್ನು ಅದಕ್ಕೆ ತೋರಿಕೊಟ್ಟು ಹುರಿದುಂಬಿಸುತ್ತಿದ್ದ ಹಾಗೆಯೇ ಕೊಲ್ಲುತ್ತ ಹೇಗೆ ಭಯಂಕರವಾಗಿ ನುಗ್ಗಿತು ಎಂಬುದನ್ನು ಪ್ರಸ್ತುತ ಪಾಠಸವರಣೆ ಸಮಂಜಸವಾಗಿ ಸೂಚಿಸಬಹುದಲ್ಲವೇ ?

---

# ಹೆಳವನಕಟ್ಟೆ ಗಿರಿಯಮ್ಮನ ಒಂದು ಅಪ್ರಕಟಿತ ಹಾಡು

—(ಸಂ.) ಎಸ್. ಶಿವಣ್ಣ

ಶ್ರೀಮತಿ ಟಿ. ಕೆ. ಇಂದುಬಾಯಿ ಅವರು 1987ರಲ್ಲಿ 'ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು' (ಪಂಡಿತ ಆವೃತ್ತಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ) ಎಂಬ ಕೃತಿಯನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಇದರಲ್ಲಿ ಆಕೆಯ 27 (ಪು. 1–50). + 14 (ಪು. 183–201) = 41 ಹಾಡುಗಳಿವೆ.

ಈ ಸಂಪುಟದಲ್ಲಿ ಸೇರದೆ ಇರುವ 'ಯಾಕೆ ದೂರವಿರೆಯಮ್ಮ ಎನ್ನ ಬಾಲನ' ಎಂಬ ಹಾಡೊಂದು 'ಕನ್ನಡ ಅಧ್ಯಯನ ಕೇಂದ್ರ', ಬೆಂಗಳೂರು ವಿಶ್ವವಿದ್ಯಾಲಯದ ಸಂಗ್ರಹದಲ್ಲಿದೆ. ಅದನ್ನು ಈ ಮುಂದೆ ಕೊಡಲಾಗಿದೆ.

ರಾಗ : ತೋಡಿ

ಯಾಕೆ ದೂರವಿರೆಯಮ್ಮ ಎನ್ನ ಬಾಲನ
ಲೋಕದೊಳಗಿವನಂಥ ಲಂಡಮಕ್ಕಳಿಲ್ಲವೆಂದು ॥ ಪಲ್ಲ ॥

ಒಂದು ಹೆಜ್ಜೆಯಿಕ್ಕಲರಿಯ ಪಲವಲದು ಬೀಳುತಾನೆ
ನಿಂದಿರುವುದನ್ನು ಕಲಿತ ನಿನ್ನೆ ಮೊದಲೆ
ಇಂದು ನಿಮ್ಮ ಮನೆಯ ಹೊಕ್ಕು ಬೆಣ್ಣೆ ಕದ್ದನೆಂಬುದು ಸರಿಯೆ
ಚೆಂದ್ಯವೆ ಗೋಪ್ಯಮ್ಮ ನಿಮ್ಮ ಕಂದನಾ ಸತಿಯಿಲ್ಲವೆ ॥ ೧ ॥

ಅನ್ನವನುಣ್ಣಲಿ ಅರಿಯ ಅಮ್ಮಿಯ ಬೇಡುತಲಿಹನೆ
ಕನ್ನಡಿಯ ನೋಡಿ ತಮ್ಮನ ತಾರೆಂದಳುತಾನೆ
ಹೊನ್ನ ತಾ ಗುಬ್ಬಿ ಯಂಬಂಥ ಆಟವನಾಡುವ ನಿಮ್ಮ
ಸನ್ನೆಮಾಡಿ ಕರೆದನೆಂಬುದು ಸಲುವಳಿಯೆ ಲೋಕದಲ್ಲಿ ॥ ೨ ॥

ಬಲುವಿಂದ ಪಾಲ್ಯೆರೆದರೆ ಬಾಯ ತೆಗೆಯಲೊಲ್ಲನು
ಕಳವಿನಿಂದಲಿ ನಿಮ್ಮ ಮನೆಗೆ ಬಂದು
ಒಲೆಯಮೇಲಿಟ್ಟ ಹಾಲ ಒಬ್ಬನೇ ಸವಿದನೆಂದು
ಹೆಳವನಕಟ್ಟೆ ರಂಗನ ಹೀಗೆ ದೂರುವುದೊಳ್ಳಿತೇ ॥ ೩ ॥

ಕ. 427 (ಗರಿ 29 ಮುಂಭಾಗ)

# ನಾಲ್ಕು ವಿಚಾರಗಳು

—ಪಿ. ಪಿ. ಕೆ.

## ೧. ವ್ಯಾಸರ ಪೂರ್ಣದೃಷ್ಟಿ

ವ್ಯಾಸ ಭಾರತದಲ್ಲಿ (ಸಭಾ ಪರ್ವ), ಪಾಂಡವರು ಜೂಜಿನಲ್ಲಿ ಸೋತ ಬಳಿಕ ದ್ರೌಪದಿ ಸಹಿತ ಅರಣ್ಯಕ್ಕೆ ಹೊರಟಾಗ, ದ್ರೌಪದಿಯ ಚಿತ್ರ ಹೀಗೆ ಬಂದಿದೆ :

ತಥೇತ್ಯುಕ್ತ್ವಾ ತು ಸಾ ದೇವೀ ಸ್ರವನ್ನೇತ್ರಜಲಾವಿಲಾ ।
ಶೋಣಿತಾಕ್ತೈಕವಸನಾ ಮುಕ್ತಕೇಶ್ಯಭಿನಿರ್ಯಯೌ ॥

(ಕಂಬನಿಯಿಂದ ತೊಯ್ದ ಆ ದೇವಿ ರಕ್ತದಲ್ಲಿ ನೆನೆದ ಏಕವಸ್ತ್ರದಲ್ಲಿ, ಮುಡಿಬಿಚ್ಚಿದವಳಾಗಿ ಅಲ್ಲಿಂದ ಹೊರಟಳು)

ನಮಗೆ ಒಂದು ಗಳಿಗೆ ಪ್ರಶ್ನೆಯೊಂದು ಕಾಡುತ್ತದೆ, ದ್ರೌಪದಿಯ ಏಕವಸ್ತ್ರ ಏತಕ್ಕೆ ರಕ್ತಮಯವಾಗಿತ್ತು ಎಂದು. ನಮ್ಮ ನೆನಪನ್ನು ಹಿಂದಕ್ಕಟ್ಟಿದರೆ, ಈ ಸಂದೇಹ ತೊಲಗುತ್ತದೆ.

ದುಶ್ಶಾಸನ ದ್ರೌಪದಿಯನ್ನು ಸಭೆಗೆ ಎಳೆದೊಯ್ಯುವಾಗ, ಅವಳು ಮೆಲ್ಲನೆ ಹೇಳಿದ್ದಳು : "ನಾನು ಬಹಿಷ್ಠೆಯಾಗಿದ್ದೇನೆ. ಮೂರ್ಖ ! ಒಂದೇ ಬಟ್ಟೆಯಲ್ಲಿದ್ದೇನೆ. ಅನಾರ್ಯ, ನನ್ನನ್ನು ನೀನು ಸಭೆಗೆ ಒಯ್ಯಬಾರದು !" ಆದರೂ ದುಶ್ಶಾಸನ ಅವಳನ್ನು ಬಿಡಲಿಲ್ಲ.

ಆದ್ದರಿಂದ. ಈಗ ದ್ರೌಪದಿಯ ವಸ್ತ್ರ ನೆತ್ತರಿನಲ್ಲಿ ತೊಯ್ದಿರುವುದಕ್ಕೆ ಅವಳ ರಜಸ್ವಲಾವಸ್ಥೆಯೆ ಕಾರಣ.

ವ್ಯಾಸರು ಹಿಂದು, ಮುಂದುಗಳನ್ನೆಲ್ಲ ಒಳಗೊಳ್ಳುವ ಸೂಕ್ಷ್ಮದೃಷ್ಟಿಯಿಂದ, ಪೂರ್ಣದೃಷ್ಟಿಯಿಂದ ಭಯಂಕರ ಸತ್ಯವೊಂದನ್ನು ಇಲ್ಲಿ ಕಂಡು ಹೇಳಿದ್ದಾರೆ. ಇಂತಹುದನ್ನು ಇತರ ಕವಿಗಳು ಕಾಣಲಾರರು, ಕಾಣಿಸಲಾರರು. (ಕುಮಾರವ್ಯಾಸ ಇದನ್ನು ಬಿಟ್ಟಿದ್ದಾನೆ ಎಂಬುದು ಗಮನಾರ್ಹ). ಚಾರು, ಘೋರ ಎರಡನ್ನೂ ಸಮಾನವಾಗಿ ದರ್ಶಿಸಬಲ್ಲುದು ವ್ಯಾಸಪ್ರತಿಭೆ.

## ೨. ವಾಲ್ಮೀಕಿ ರಾಮಾಯಣದ ಒಂದು ಪ್ರಕ್ಷೇಪ

ತೀ. ನಂ. ಶ್ರೀಕಂಠಯ್ಯನವರ 'ಬಿಡಿಮುತ್ತು' ಸಂಕಲನದಲ್ಲಿ ಈ ಪದ್ಯವಿದೆ:

ಹಾರೋऽಪಿ ನಾರ್ಪಿತಃ ಕಂಠೇ ಸಂಭೋಗಸ್ಪರ್ಶಭೀರುಣಾ ।
ಆವಯೋರಂತರೇ ಜಾತಾಃ ಪರ್ವತಾಃ ಸರಿತೋ ದ್ರುಮಾಃ ॥ [1]

ಈ ಪದ್ಯದ ಆಕರವನ್ನು ನಿರ್ದೇಶಿಸುತ್ತ ತೀ.ನಂ.ಶ್ರೀ. ಅವರು "ವಾಲ್ಮೀಕಿ ಮುನೇಃ" ಎಂದು 'ಸುಭಾಷಿತ ರತ್ನಭಾಂಡಾಗಾರ'ದಲ್ಲೂ 'ಸೂಕ್ತಿರತ್ನಹಾರ'ದಲ್ಲೂ ಉಕ್ತವಾಗಿರುವುದನ್ನು ಉಲ್ಲೇಖಿಸಿದ್ದಾರೆ; ಅಂತೆಯೆ "ಉದಾತ್ತ ರಾಘವೇ" ಎಂಬ 'ಹನುಮನ್ನಾಟಕದ' ಹೇಳಿಕೆಯನ್ನು ಸೂಚಿಸಿದ್ದಾರೆ. ಅಷ್ಟೇ ಅಲ್ಲ, "ಈ ಶ್ಲೋಕ ವಾಲ್ಮೀಕಿ ರಾಮಾಯಣದಲ್ಲಿ ದೊರೆಯುವುದಿಲ್ಲ. 'ಉದಾತ್ತ ರಾಘವ'ದ ಕರ್ತೃ ಮಾಯುರಾಜನೆಂದು ತಿಳಿದುಬರುತ್ತದೆ. ಈ ನಾಟಕ ಈಗ ದೊರೆಯುವುದಿಲ್ಲ" ಎಂದೂ ಸೇರಿಸಿದ್ದಾರೆ.[2]

ಆದರೆ ಪ್ರಕೃತಶ್ಲೋಕ ವಾಲ್ಮೀಕಿ ರಾಮಾಯಣದ ಕೆಲವು (ದಾಕ್ಷಿಣಾತ್ಯ?) ಹಸ್ತಪ್ರತಿಗಳಲ್ಲಿ ದೊರೆಯುವಂತೆ ತೋರುತ್ತದೆ. ಏಕೆಂದರೆ, ಪಂಡಿತ ಎ. ಎಂ. ಶ್ರೀನಿವಾಸಾಚಾರಿಯರ್ ಅವರ ರಾಮಾಯಣ ಸಂಗ್ರಹದಲ್ಲಿ[3] ಈ ಶ್ಲೋಕವುಂಟು.

ಬಹುಶಃ ವಿಷಯವಿಷ್ಟು: ಮೂಲತಃ ಈ ಸೊಗಸಾದ ಪದ್ಯ 'ಉದಾತ್ತ ರಾಘವ'ದ್ದೇ; ಅದನ್ನು ಈಚೆಗೆ ಯಾರೋ ವಾಲ್ಮೀಕಿ ರಾಮಾಯಣದೊಳಕ್ಕೆ ಸಂದರ್ಭೋಚಿತವಾಗಿ ಪ್ರಕ್ಷೇಪಿಸಿದ್ದಾರೆ. ಆದ್ದರಿಂದ ಸುಭಾಷಿತ ಸಂಕಲನಗಳಲ್ಲಿ ಅದನ್ನು ವಾಲ್ಮೀಕಿ ಕೃತವೆಂದಿರುವುದು ಅಕಾರಣವಲ್ಲ.

ಒಂದು ಕೃತಿಯ ಪದ್ಯ ಮತ್ತೊಂದು ಅನ್ಯಕವಿಕೃತಿಗೆ ವರ್ಗಾವಣೆಗೊಳ್ಳುವ ಪ್ರಕ್ರಿಯೆ ವಿರಳ. ಇದು ಪ್ರಕ್ಷೇಪಗಳ ಒಂದು ವಿಶೇಷ ಪ್ರಕಾರ ಎನ್ನಬಹುದು.

---

1 'ಬಿಡಿಮುತ್ತು', ಪು. ೮೮. ಈ ಶ್ಲೋಕವನ್ನು ತೀ.ನಂ.ಶ್ರೀ. ಹೀಗೆ ಅನುವಾದಿಸಿದ್ದಾರೆ:

ತಬ್ಬಿದಾಗಗಲಿಸುವುದೆಂದಳುಕಿ ಕೊರಳಿನಲಿ
ಸರವನೂ ಧರಿಸಿಕೊಳಲಿಲ್ಲವೆಂದು
ಹಬ್ಬಿ ನಮ್ಮಿಬ್ಬರಿಗೆ ನಡುವೆ ಹರಡಿಹವಿಂದು
ಬೆಟ್ಟಗಳು ಹೊಳೆಗಳು ಹೆದ್ದೊರೆಗಳು

2 ಅದೇ, ಪು, ೨೩೫.

3 **Valmiki Ramayana** (Condensed in poet's own words), G. A. Natesan & Co., Madras, 1935. P. 330.

## ೩. ಕಾಳಿದಾಸನ ಒಂದು ಪದಪ್ರಯೋಗ

ಕಾಳಿದಾಸನ 'ಕುಮಾರ ಸಂಭವ'ದಲ್ಲಿ, ಶಿವ ಮನ್ಮಥನಿಗೆ ಮುಳಿದು ಉರಿಗಣ್ಣು ತೆರೆದಾಗ ಈ ಮಾತು ಬರುತ್ತದೆ.

....ತಾವತ್ಸ ವಹ್ನಿರ್ಭವನೇತ್ರಜನ್ಮಾ
ಭಸ್ಮಾವಶೇಷಂ ಮದನಂ ಚಕಾರ ॥

ಇಲ್ಲಿನ 'ಭವ' ಶಬ್ದದ ಬಗ್ಗೆ ವಿದ್ವಾಂಸರೊಬ್ಬರು ಹೀಗೆ ಹೇಳುತ್ತಾರೆ: "ಸಂಹಾರ ಪ್ರಸಂಗದಲ್ಲಿ 'ಭವ' ಎಂಬ ಶಬ್ದ ಉಚಿತವಲ್ಲ. 'ಹರನೇತ್ರ ಜನ್ಮಾ' ಎಂದಿದ್ದರೆ ಚೆನ್ನಾಗಿತ್ತು. ಮಹಾಕವಿಯೂ ಒಮ್ಮೊಮ್ಮೆ ಪ್ರಮಾದ ಮಾಡುವುದುಂಟು.[4]

ಈ ಟೀಕೆ ಮೊದಲ ನೋಟಕ್ಕೆ ಸರಿಯೆನಿಸುತ್ತದೆ; ಆದರೆ ಪುನರಾಲೋಚಿಸಿದಾಗ, ಆಕ್ಷೇಪಣೆಗೆ ಅವಕಾಶವಿಲ್ಲವೆನಿಸುತ್ತದೆ. ಇಲ್ಲಿ ಸಂಹಾರ ಪ್ರಸಂಗವಿದೆ, ನಿಜ. ಆದರೂ ಕಾಮ ವಿನಾಶಗೊಳ್ಳುವುದಿಲ್ಲ; ಮುಂದೆ ಮತ್ತೆ ಬದುಕುತ್ತಾನೆ; ನಿರ್ದೇಹಿಯಾದರೂ 'ಅಂಗಭವ'ನಾಗಿ, ಚಿರಂಜೀವಿಯಾಗುತ್ತಾನೆ. ('ಕುಮಾರಸಂ-ಭವ' ಎಂಬ ಕೃತಿಶೀರ್ಷಿಕೆಯನ್ನೂ ನೆನಪಿಡಬೇಕು.)

ಮಹಾಕವಿಗಳು ಪ್ರಮಾದ ಮಾಡುವುದಿಲ್ಲವೆಂದಲ್ಲ; ಆದರೆ ಪ್ರಮಾದವೆಂದು ನಮಗೆ ತೋರಿದ್ದೆಲ್ಲ ವಾಸ್ತವವಾಗಿ ಹಾಗಾಗಬೇಕಿಲ್ಲ.

## ೪. ಸ್ವೋಪಜ್ಞತೆ

ಪ್ರತಿಯೊಬ್ಬ ಒಳ್ಳೆಯ ಲೇಖಕನೂ ಒಂದರ್ಥದಲ್ಲಿ ಸ್ವೋಪಜ್ಞ (original); ಇನ್ನೊಂದರ್ಥದಲ್ಲಿ ಅಲ್ಲ. ಅವನಿಗೆ ತನ್ನ ಭಾಷೆ, ಸಾಹಿತ್ಯಗಳಲ್ಲಿ ಒಂದು ಪರಂಪರೆಯಿರುತ್ತದೆ; ಅವನು ಅದರ ಒಂದು ಅಂಗವಾಗಿರುತ್ತಾನೆ. ಹಾಗೆ, ನೋಡಿದರೆ, ಪರಂಪರೆಯನ್ನು ನಿರಾಕರಿಸುವುದರಲ್ಲಲ್ಲ, ಒಪ್ಪಿಕೊಳ್ಳುವುದರಲ್ಲಿ ಒಬ್ಬ ಲೇಖಕನ ಮಹತ್ವವಿರುತ್ತದೆ. (ಪರಂಪರೆ ಬೇರೆ, ಸಂಪ್ರದಾಯ ಬೇರೆ ಎಂಬುದನ್ನು ನೆನಪಿಡಬೇಕು). ಅಂತೆಯೇ ಅನ್ಯಸಾಹಿತ್ಯಗಳ ಪ್ರಭಾವಗಳೂ ಅವನ ಮೇಲೆ ಕ್ರಿಯಾಶೀಲವಾಗಿರುತ್ತವೆ. ಅವುಗಳನ್ನು ಹೀರಿಕೊಂಡೂ ಮೀರಿ ಬರೆಯುವುದರಲ್ಲಿ, ತನ್ನತನವನ್ನು ಪ್ರಕಟಿಸುವಲ್ಲಿ ಅವನ ಅಗ್ಗಳಿಕೆಯನ್ನು ಗುರುತಿಸುತ್ತೇವೆ.

ಈ ಸಂದರ್ಭದಲ್ಲಿ, ಆಶ್ಚರ್ಯಕರವಾಗಿ ಸಮಾನಾರ್ಥಕವಾದ ಮೂರು ಹೇಳಿಕೆಗಳನ್ನು ಲೆಕ್ಕಿಸುವುದಷ್ಟೆ ವಿವಕ್ಷಿತ:

---

4 ಎನ್. ರಂಗನಾಥ ಶರ್ಮಾ, 'ಗಿರಿಜಾಕಲ್ಯಾಣ-ಕುಮಾರಸಂಭವ', ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೭೨-೨, ಪು. ೩೨.

"ಮಹಾಪುರುಷರು ಸ್ವೋಪಜ್ಞತೆಗಿಂತ ಮಿಗಿಲಾಗಿ ವ್ಯಾಪ್ತಿ, ವೈಶಾಲ್ಯಗಳಿಂದ ವಿಶಿಷ್ಟ ಸ್ಥಾನ ಪಡೆಯುತ್ತಾರೆ. ಜೇಡನಂತೆ ಸ್ವಂತ ಒಡಲಿನಿಂದ ಬಲೆ ನೇಯುವುದರಲ್ಲಿ, ಮಣ್ಣು ಹುಡುಕಿ ಇಟ್ಟಿಗೆ ಮಾಡಿ ಮನೆ ಕಟ್ಟುವುದರಲ್ಲಿ ಕಂಡುಬರುವಂತಹ ಸ್ವೋಪಜ್ಞತೆಯನ್ನು ನಾವು ಅಪೇಕ್ಷಿಸುವುದಾದರೆ—ಯಾವ ಮಹಾವ್ಯಕ್ತಿಯೂ ಸ್ವೋಪಜ್ಞನಲ್ಲ. ಅಥವಾ ಇತರರಿಗಿಂತ ಭಿನ್ನವಾಗಿರುವುದೇ ಅಮೂಲ್ಯವಾದ ಸ್ವೋಪಜ್ಞತೆಯಲ್ಲ. ಅತ್ಯುನ್ನತ ಪ್ರತಿಭಾಶಾಲಿ ಅತ್ಯಂತ ಋಣಿಯಾದ ವ್ಯಕ್ತಿ"—ಎಮರ್ಸನ್.

"ಆಕರ್ಷಕವಾದ ಸ್ವೋಪಜ್ಞತೆ ಕಲೆಯಲ್ಲಿ ಸರ್ವಸ್ವ...ಅತ್ಯಂತ ಸ್ವೋಪಜ್ಞನಾದ ಕವಿ ತನ್ನ ಪೂರ್ವಿಕರಿಗೆ ಮತ್ತು ಸಮಕಾಲೀನರಿಗೆ ಬಹಳ ಋಣಿಯಾಗದೆ ಇಲ್ಲವೆಂಬುದನ್ನು ಕಾಣುತ್ತೇವೆ. ಕಾವ್ಯಕಲೆ ಒಂದು ದಿನದಲ್ಲಿ ಪರಿಪೂರ್ಣಗೊಳ್ಳುವುದಿಲ್ಲ"—ವಿಲಿಯಂ ಕಲೆನ್ ಬ್ರಿಯಂಟ್.

"ಕಾವ್ಯದಲ್ಲಿ ಪೂರ್ಣ ಸ್ವೋಪಜ್ಞತೆ, ಗತಕಾಲಕ್ಕೆ ಋಣರಾಹಿತ್ಯ ಎನ್ನುವಂಥದಿಲ್ಲ"—ಟಿ. ಎಸ್. ಇಲಿಯಟ್.

ಆದ್ದರಿಂದ, ಏಕಕಾಲದಲ್ಲಿ ಪ್ರತಿಭಾಶಾಲಿಗಳೂ ಋಣಿಗಳೂ ಆದ ಲೇಖಕರು ವಿರಳ![5]

---

5 "ನಾಸ್ತ್ಯಚೋರಃ ಕವಿಜನಃ" (ಕದಿಯದ ಕವಿಯಿಲ್ಲ) ಎಂಬ ರಾಜಶೇಖರನ ಉಕ್ತಿಯನ್ನು ಇಲ್ಲಿ ನೆನೆಯಬಹುದು. "ಜಗತ್ತಿನ ಮಹಾಕವಿಗಳನ್ನು ಸಾಲಾಗಿ ನಿಲ್ಲಿಸಿ ನೋಡಿದರೆ ಗುಟ್ಟು ರಟ್ಟಾಗುತ್ತದೆ: ಒಬ್ಬನ ಕೈ ಮತ್ತೊಬ್ಬನ ಜೇಬಿನಲ್ಲಿ!" ಎಂಬೊಂದು ಪಾಶ್ಚಾತ್ಯ ಹೇಳಿಕೆ ಕೂಡ ಸ್ಮರಣೀಯ.

# ತಾಳ ಪ್ರಸ್ತಾರ ಲಕ್ಷಣ ಓಲೆ ಹಸ್ತಪ್ರತಿ*

ಸಂ. : ಕೆಳದಿ ಗುಂಡಾಜೋಯಿಸ್

[ಕೆಳದಿ ಇತಿಹಾಸ ಸಂಶೋಧನಾಲಯದ ಭಾಂಡಾಗಾರದಲ್ಲಿರುವ ಕಾವ್ಯಶಾಸ್ತ್ರಗ್ರಂಥಗಳ ತಾಳೆಯೋಲೆ ಕಟ್ಟಿನಲ್ಲಿ ಹಲವು ಅಪೂರ್ವ ಸಂಗೀತ ಶಾಸ್ತ್ರ ಗ್ರಂಥಗಳೂ ಅಡಕವಾಗಿವೆ. ಹಸ್ತಪ್ರತಿ ಸಂಖ್ಯೆ ೧೬೨, ಪ್ರಮಾಣ : ೨೭-೭ ಸೆ.ಮೀ. ಉದ್ದ; ೩ ಸೆ.ಮೀ. ಅಗಲ ಹಾಗೂ ೧೭೩ ಓಲೆ ಗರಿಗಳುಳ್ಳ ಈ ಹಸ್ತಪ್ರತಿಯು ಇದೇ ಸಂಪಾದಕರ ತಾತಂದಿರಾದ ದಿ॥ ಸಾ. ಕ. ಲಿಂಗಣ್ಣಯ್ಯ ನವರ ಮನೆಯಲ್ಲಿತ್ತು. ದಿ॥ ಲಿಂಗಣ್ಣಯ್ಯನವರು ಕರ್ನಾಟಕದ ಪ್ರಸಿದ್ಧ ಚಿತ್ರಕಲಾವಿದರಲ್ಲಿ ಪ್ರಮುಖರಾಗಿದ್ದು ಅವರ ಅನೇಕ ಕೃತಿಗಳು ಕೆಳದಿ ಸಂಶೋಧನಾಲಯದಲ್ಲಿ ಪ್ರದರ್ಶಿಸಲ್ಪಟ್ಟು ವಿದೇಶೀಯರಿಂದಲೂ ದೇಶೀಯ ಕಲಾ ವಿದ್ವಾಂಸರಿಂದಲೂ ಪ್ರಶಂಸೆ ಪಡೆದಿವೆ. ಲಿಂಗಣ್ಣಯ್ಯ ನವರು ಸಂಗೀತಶಾಸ್ತ್ರದಲ್ಲಿಯೂ, ಪ್ರಾವೀಣ್ಯ ಹೊಂದಿ ವೀಣಾಭ್ಯಾಸ ಕ್ರಮ* ಎಂಬ ಕೃತಿ ಯನ್ನೂ ವಿರಚಿಸಿದ್ದಾರೆ. ನಮ್ಮ ತಾತಂದಿರಾದ ಇವರ ಮನೆಯೇ ವಿಶ್ವೇಶ್ವರಪುರದಲ್ಲಿ ಪ್ರಸಿದ್ಧ ಕಲಾ ಕೇಂದ್ರಗಳಲ್ಲಿ ಒಂದೆನಿಸಿತ್ತು. ಆಗಿನ ದಿವಾನ್ ಶ್ರೀ (ದಿ) ಕಾಂತರಾಜಾ ಅರಸರು ಇವರ ಕಲಾ ಸಂವರ್ಧನೆಗೆ ವಿಪುಲ ಪ್ರೋತ್ಸಾಹ ನೀಡಿದರು. ಅನೇಕ ಅಲಭ್ಯ ಹಾಗೂ ಅಪ್ರಕಟಿತ ತಾಳೆಯೋಲೆ ಕೃತಿಗಳನ್ನು ದಿ॥ ಎ. ಆರ್. ಕೃಷ್ಣಶಾಸ್ತ್ರಿಗಳು ಇವರ ಮನೆಗೆ ಭೇಟಿಯಿತ್ತಾಗ ಕಂಡುಕೊಂಡು ಇದೇ ಕಟ್ಟಿನಲ್ಲಿದ್ದ 'ಕವಿಜಿಹ್ವಾಬಂಧನಮ್' ಕೃತಿಯನ್ನು ಸಂಪಾದಿಸಿ ಪ್ರಕಟಿಸಿ ದ್ದಾರೆ. 'ವೃತ್ತರತ್ನಾಕರ' ಅಲಂಕಾರ ಗ್ರಂಥವೂ ಈ ಕಟ್ಟಿನಲ್ಲಿ ಗೋಚರಿಸಿದುದನ್ನು ಬೆಂಗಳೂರು ವಿಶ್ವವಿದ್ಯಾಲಯದ ವಿದ್ವಾಂಸರು ಪರಿಶೋಧಿಸಿದ್ದಾರೆ. ಈ ಕಟ್ಟಿನಲ್ಲಿ ಸುಮಾರು 48 ಕೃತಿಗಳಿವೆ. ಸಂಗೀತ ಚೂಡಾಮಣಿ (೨೩) ತಾಳ ಪ್ರಸ್ತಾರ ಲಕ್ಷಣ ಶ್ಲೋಕ (೩೧) ಈ ಎರಡು ಸಂಗೀತ ಭಾಗ ಕೃತಿಗಳು ಇದರಲ್ಲಿ ಉಪಲಬ್ಧವಿವೆ.

ಪ್ರಕೃತ ಈ ಕಟ್ಟಿನಲ್ಲಿ ಉಪಲಬ್ಧವಿರುವ "ತಾಳ ಪ್ರಸ್ತಾರ ಲಕ್ಷಣ ಶ್ಲೋಕಾಃ" ಕೃತಿಯ ಪಾಠಾಂತರವನ್ನು ವಿದ್ವಾಂಸರ ಪರಿಶೋಧನೆಗಾಗಿ ನೀಡಲಾಗಿದೆ. ಕೇವಲ ಮೂರು ಓಲೆಗಳಲ್ಲಿ ಮಾತ್ರ ಕೃತಿಯಿದ್ದು ಸರಿ ಸುಮಾರಾಗಿ ಸಮಗ್ರವೆಂದು ಪರಿಗಣಿಸಬಹುದು.

ಗ್ರಂಥಪಾಠದ ಲಿಪಿಸ್ಖಾಲಿತ್ಯಗಳನ್ನು ತಿದ್ದುವ ಗೋಜಿಗೆ ಹೋಗಿಲ್ಲ. ಇದು ಯಥಾ ಕೃತಿ.]

## ಪಾಠಾಂತರ

ಓಲೆ ನಂ. ೧ರ ಮುಂಭಾಗ (ಮೂ.ಪಾ.ದಲ್ಲಿ ಪುಟ ಸಂಖ್ಯೆ ಉಲ್ಲೇಖವಿಲ್ಲ).

---

ದಿ. 1-6-1988 ರಂದು ಬೆಂಗಳೂರಿನಲ್ಲಿ ತಾಳವಾದ್ಯ ಕಲಾ ಕೇಂದ್ರದ ಆಶ್ರಯದಲ್ಲಿ 1988ನೇ ತಾಳವಾದ್ಯೋತ್ಸವದಲ್ಲಿ ಮಂಡಿಸಿದ ಪ್ರಬಂಧ.

* ಚಿತ್ರಭಾಗವತದಲ್ಲಿ ಕಂಡುಬರುವ ಈ ಹಸ್ತಪ್ರತಿಯು ಅಲಭ್ಯವಾಗಿದ್ದು ಪರಿಶೋಧಿಸು ತ್ತಿದೇನೆ. ಲಿಂಗಣ್ಣಯ್ಯನವರ ಮಕ್ಕಳಾದ ಸಾ. ಕ. ನಾರಾಯಣರಾವ್ ಹಾಗೂ ಸಾ. ಕ. ಕೃಷ್ಣ ಮೂರ್ತಿ ವೀಣೆಯಲ್ಲಿ ಪ್ರಮುಖ ವಿದ್ವಾಂಸರು. ಮೊಮ್ಮಕ್ಕಳಾದ ಕೆ. ಶ್ರೀನಿವಾಸ್ ಪಾಕ್ಷರಾಗಿ ದ್ದರೂ ಸಂಗೀತದಲ್ಲಿ ಪ್ರಾವೀಣ್ಯ ಹೊಂದಿದ್ದಾರೆ.

• ನೂರೊಂದು ತಾಳ ಶ್ಲೋಕದ ಮುಂದೆ ॥ [1]

ಅನ್ಯೈಪಿ ಸಂತಿ ಭೂಯಾಂಸಃ ತಾಲಾಸ್ತೆ ಲಕ್ಷ್ಮವರ್ತ್ಮನಿ ।
ಪ್ರಸಿದ್ಧಿ ವಿಧುರತ್ವೇನಶಾಸ್ತ್ರಿಸ್ಮಿನ್ನ ಪ್ರದರ್ಶಿತಾಃ ॥ ೧ ॥

ತದ್ಭೇದ ಪ್ರತ್ಯಯಾರ್ಥಂತ್ತು ಲಘೂಪಾಯಾ ಭವಂತ್ಯಮೀ ।
ಪ್ರಸ್ತಾರಸಂಖ್ಯಾ ನಷ್ಟಂಚೋದ್ದಿಷ್ಟಂ ಪಾತಾಲಿಕಸ್ಥಥಾ ॥ ೨ ॥

ದೃತಮೇರುರ್ಲಘೂರ್ಮೇರುರ್ಗುರುಮೇರುಃ ಪ್ಲುತಸ್ಯಚ ।
ಮೇರುಃ ಸಂಯೋಗಮೇರುಸ್ಯಾಶ್ಚಾ ಖಂಡಪ್ರಸ್ತಾರಕಸ್ತಥಃ ॥ ೩ ॥

ಪ್ರಾಜ್ಯಾಂ ಚತುರ್ಣಾಂ ಮೇರುಣಾಂ ನಷ್ಟೋದ್ದಿಷ್ಟಃ ಪೃಥಕ್‌ಪೃಥಕ್ ।
ಏಕೋನವಿಂಶತಿರಿತಿಪ್ರತ್ಯಯಾಸ್ತಾಂಬವೇಧುನಾ ॥ ೪ ॥

ನ್ಯಸ್ಯಾಲ್ಪಮಧ್ಯಾನ್ಮಹತೊದ್ಧಸ್ತಾಚ್ಚೆಷಯಥೋಪರಿ ।
ಪ್ರಾಗುನೆ ವಾಮಸಂಸ್ಥಾಂಸ್ತು ಸಂಭವೆ ಮಹತೊ ಲಿಖೇತ್ ॥ ೫ ॥

ಅಲ್ಪೆನ ಸಂಭವೇತ್ತಾಳ ಪೂರ್ರ್ಯಾಚ್ಚೈವಾಷ್ಟಧಂ ವಿಧಿಃ ।
ಸರ್ವೆದ್ರುತಾವಹಿಃ ಕಾರ್ಯಃ ಪ್ರಸಾರೊಯಂ ಲಘೌ ಗುರೂ ॥ ೬ ॥

ಪ್ಲುತವ್ಯಸ್ತೆ ಸಮಸ್ತೆಚ ನತು ವ್ಯಸ್ತೆ ದೃತೆಸ್ತಿ ಸಃ ।
ಏಕದ್ವ್ಯಂ (ಕೌಕ್ರ) ಮಾನ್ಯಸ್ಯ ಯುಂಜೀಕಾಂತ್ಯಂ ಪುರಾತನ್ಯಃ ॥ ೭ ॥

ದ್ವಿತೀಯ ತುರ್ಯಷಷ್ಠಾಂ ಕೈರಭಾವೆ ತುರ್ಯಷಷ್ಠಯೋಃ ।
ತೃತೀಯ ಪಂಚಮಾಂ ತಾಭ್ಯಾಂ ಕ್ರಮಾತ್ತಂ ಯೋಗಮಗ್ರತಃ ॥ ೮ ॥

ಲಿಖೆದ್ದಕ್ಷಿಣಸಂಸ್ಥ್ಯೆವಮಂಕಶ್ರೇಣೀ ವಿಧೀಯತೆ ।
ಗಜಾಂಕೈತಿಷ್ಟ ತಾಳಸ್ಯಾದ್ರುತಸಂಖ್ಯXX[2]ಸ್ಸಮಾಪ್ಯತೆ ॥ ೯ ॥

ದೃತೊ ಲಘುಃ ಸಾರ್ಧಮಾತ್ರುಚ್ಚೈಕೈಕದ್ರುತವರ್ಧಿತಾಃ ।
ಗುರುಃ ಸಾರ್ಧಂ ದ್ವಿಮಾತ್ರುತಃ ॥ ೧೦ ॥

ಪ್ಲುತಃ ಸಾರ್ಧಂ ತ್ರಿಮಾತ್ರುಚೆದೆಕೈಕದ್ರುತವರ್ಧಿತಃ ।
ಕಾಲಭೆದಾಃ ಕ್ರಮಾದಂಕೈ ಸಂಖ್ಯಾಯಂತ್ತೆ ಷ್ಟಿತ್ರೈರಿಹ ॥ ೧೧ ॥

ಯುಮಂಕಯೋನಾದಂತ್ಯಂ ಕೋಲಬ್ಧಿಷ್ಟ್ಯಿರಂ ತತಃ ಕ್ರಮಾತ್ ।
ಭೆದಾದೃತಾಂತ್ತಾ ಲಿಪ್ಟುಂತ್ತಾ ಗುರ್ವಂತ್ತಾಶ ಪ್ಲುತಾಂತ್ತಕಾ ॥ ೧೨ ॥

---

1 ಮೂ.ಪಾ.ದಲ್ಲಿರುವ ಸಾಲುಗಳನ್ನು ಇಲ್ಲಿ ಪರಿಷ್ಕರಿಸಿ ಶ್ಲೋಕ ಸಂಖ್ಯಾನುಗುಣವಾಗಿ ನೀಡಲಾಗಿದೆ. 2 ಲಿಪಿ ಕಾಟು ಹೊಡೆದಿದೆ.

ಸಂಖ್ಯಾಯಂತ್ರ ಯಿತಿ ಪ್ರೊಕ್ತೈಃ ಪ್ರೊಕ್ತಾನಿಃ ಪಂಕ (ತ?) ಸೂರಿಣಃ ।
ಅತ್ರೈತಾವತಿಥಾ ಭೆದ ತಸ್ಯೊತ್ತರಮಿಹೊಚ್ಯತೆ ॥ ೧೩ ॥[1]

ಭೆದಾನಾಯಾಮತಂಮಧ್ಯೆ ನಷ್ಟಂ ಪ್ಲಶ್ಲ ಕೃತೊ ಭವೆತ್ ।
ತಾವತ್ಸಂಖ್ಯಾಂಕ ಪರ್ಯತ್ತಂ ಲಿಖೆತ್ಸಂಖ್ಯಾಂಕ ಸಂತತಿಂ ॥ ೧೪ ॥

ಅಂತ್ಯಾಂಕೆ ತತ್ರ ನಷ್ಟಾಂಕಂ ಪಾತ ಎದಥ ಶೆಷತಃ ।
ಪಾತಯೆತ್ಪೂರ್ವ ಪೂರ್ವಾಂಕಂ ತತ್ರನಾ ಪತಿತಾದ್ಯತಃ ॥ ೧೫ ॥

ಪೂರ್ವಶ್ಚೆತ್ಪತಿತಾನಸ್ಯೊಲ್ಲಘುಸ್ತು ಪತಿತಾದ್ಭವೆತ್ ।
ಉತ್ತರೆಣ ಕೃತಾರ್ಥೆನ ಸಹಿತಾ ತದಸಂಭವೆ ॥ ೧೬ ॥

ಅಕೃತಾರ್ಥೆನ ಪೂರ್ವೆಣ ಸಾಂತ್ತರಃ ಪತಿತಂ ಪೃಥಕ್ ।
ಲಘುರ್ನಿರಂತ್ತರೆತ್ವಸ್ಮಿನ್ ಲಘುರೆವ ಗುರುರ್ಭವೆತ್ ॥ ೧೭ ॥

ಗುರುಹೆತಾ ತೃತೀಯೆತು ಪತಿತೆಚ ಪ್ಲುತಿರ್ಭವೆತ್ ।
ಅಂಕಾಭಾದೆ ದ್ಯತೊಗ್ರಾಹ್ಯಾಸ್ತಾಧಪೂರಣ ಹೆತವಃ ॥ ೧೮ ॥[2]

ಯಿತಿನಷ್ಟಸ್ಯ ವಿಜ್ಞೆಯಮುತ್ತರಂ ರೂಪನಿರ್ಣಯಾತ್ ।
ನಷ್ಟೆತ್ರ ಕಥಿತೊ ಭೆದಃ ತತುಮ ಪ್ರಶ್ನಯಿಾದೃಶೆ ॥ ೧೯ ॥

ಉದ್ದಿಷ್ಟಂ ತತ್ರಸಂಖ್ಯಾಂಕ ಸಂತತಿಂ ನಷ್ಟವಲ್ಲಿಭೆತ್ ।
ಯೈರಂಕೈಃ ಪತಿತೈರ್ನಷ್ಟೆ ಲಭ್ಯಂತೆಯೆಪ್ಲುದಾತಯಃ ॥ ೨೦ ॥

ತಾನ್ಯೆವಾಂಕಾನ್ಸ ಲಭತೆ ತದ್ಯೆವೊದ್ದಿಷ್ಟವಶಾಶ್ರಿತಾಃ ।
ಯದ್ವಾ ಪ್ಲುತಂ ಭವೆದಂಕ ಮಧ್ಯೆಕಾ ತತ್ರ ಸಪ್ತಮಃ ॥ ೨೧ ॥

ತದಭಾವೆಪಿ ಷಷ್ಠಾಂತೆ ಪಾತಿತೆತ್ಯಂತ ಮಧ್ಯತಃ ।
ನಿಃಶೆಷಸಪ್ಲುತಾಲ್ಲಭ್ಯೊ ಲಬ್ಧ ಹೀನಾಂತ ಶೇಷತಃ ॥ ೨೨ ॥

ಜ್ಞಾತಪೂರಣಸಂಖ್ಯಾಯಾಂ ಉದ್ದಿಷ್ಟೊತ್ತರಯಿಷ್ಯತೆ ।
ಆದೌ ರೂಪಮಥೈಕೈಕಮಂಕಂ ಸಂಖ್ಯಾಂಕ ಸಂಖ್ಯಕಂ ॥ ೨೩ ॥

ಕ್ರಮಾದಧೊ ಧೊವಿನ್ಯಸ್ಯಾದಂತ್ಯಾದೀಂಶ್ಚ ತತಃ ರಸ್ತಥಾ ।
ಸ್ವಪದ್ವಿಸ್ಥಾನ್‌ಲಿಭೆದಂಕಾದಂತ್ಯಸಂಖ್ಯಾಂಕವದ್ಯತಂ ॥ ೨೪ ॥

ಕಿಂತ್ವಪ್ರತಿಸಿಧಿನಾತ್ರ ವಿದ್ಯತೆ ತುರ್ಯಷಷ್ಠಯೋಃ ।
ಮಿಷ್ಟತಾಳದ್ರುತಮಿತಾಂವೀಧಿಕಾಂವಿಲಿಖೆದಪಿ ॥ ೨೫ ॥

---

1 ಮೂ. ಪಾ.ದಲ್ಲಿ ಈ ಸಂಖ್ಯೆಯು ಕೈಬಿಟ್ಟು ಹೋಗಿದೆ.  2 ಅದೇ.

ಕ್ರಮಾದಂತ್ಯೋಪಾಂತ್ಯತುರ್ಯಷಷ್ಠೈರ್ಯತ್ರ ದ್ರುತಾದಯಃ ।
ನಿರ್ಣೀಯಂತೆ ಸರ್ವತೋತ್ರ ಪಾತಾಳಃ ಸೋಭಿ(ಖಿ?)ಧೀಯತೆ ॥ ೨೬ ॥

ಪಂಕ್ತಿಂ ಕೃತ್ವೈಷ್ಟತಾಳಸ್ಥ ದ್ರುತಸಂಮಿತತೂಷ್ಣಿಕಾಂ ।
ತಿರಶೀಂ ತತ್ಪರಾಮೂನಾಂ ತೊಪ್ಯೈನಾಥ ತತಃ ಪರಾಂ ॥ ೨೭ ॥

ದ್ವಿದ್ವಿತೋ (ಕ್ರಿಂ?) ನಿತಾಸ್ತ್ವನ್ಯಾಃ ಪೂರ್ವತಾಥಾಂಕಯೋಜನಾ ।
ದ್ವೌದ್ವೌ×[1] ತಾಸಾಮಾದ್ಯತೋಷ್ಟೌ ಸ್ಯಾತಾಮೇಕಾಂತ ಸಂಯುತೌ ॥ ೨೮ ॥

ಅಥಷ್ಟನ್ಯಾ[2]ಸ್ತುತೀಯಾದಿ ವಿಷಮೆ ಕೊಷ್ಟಕೆ ಲಿಖೆತ್ ।

ಅಂತ್ಯಾದ್ಯಂತ ಚತುಷ್ಕಸ್ಯಯೋಗಃ ಸಂಖ್ಯಾಂಕಸಂಧು(ಭ)ವೇತ್ ॥ ೨೯ ॥

ಸಮುತ್ಪನ್ನಂ ವಿನ್ಯತೇಷಾಂ ಯೋಗಂನ್ಯಸ್ಯಾಥಪ×ಷು ।
ಪರಾಮುಶೆಷಕೊಷ್ಠೈಷು ಚತುರ್ಯೋಗಾಗಮಿಂಷ್ಯತ ॥ ೩೦ ॥

ನಾಸ್ತಿ ಪ್ರತಿನಿಧಿಸ್ತಾಸಾಮಂತಯೋಸ್ತುರ್ಯಷಷ್ಠಯೋಃ ।
ತಾನಾಂಸ್ವಭಾವತೊ ಯಾಸ್ತು ನಿಷ್ಪನ್ನಾಊರ್ಧ್ವಪಙ್ಕ್ತಯಃ ॥ ೩೧ ॥

ತನ್ಮಧ್ಯೆತು ಸಮಾತೋಷ್ಠೌತ್ಯನೆಂತ್ಯಾದಧಸ್ತತಃ
ಅಂತಃಕಾರ್ಯೋಥತ್ತೈರಂಕೈರ್ಭೇದಸಂಖ್ಯಾಭಿಧೀಯತೆ ॥ ೩೨ ।

ವಿಷಮಾಯಾಮೂರ್ಧ್ವಪಙ್ಕ್ತೌ ಸ್ಥಿತೈರಂಕೈರಥ ಕ್ರಮಾತ್
ಏಕದ್ರುತಾದ್ಯ ವಿಷಮಸ್ತ್ರ್ಯಾದಿಸಂಖ್ಯಾಸ್ತು ತದ್ಗತಾಃ ॥ ೩೩ ॥

ಸರ್ವದ್ರುತಾಂತ್ಯಾಮಾಯಂತ್ಯೆ ಸಮಪಙ್ಕ್ತಿಸ್ಥಿತೈಃ ಪುನಃ
ದ್ರುತತಾನಾದಯೊದ್ವ್ಯಾದಿ ಸಮಸಂಖ್ಯಾಸ್ತು ತದ್ಗತಾಃ ॥ ೩೪ ॥

ಸರ್ವದ್ರುತಾಂತ್ಯಾ ಜಾಯಂತ್ಯೆ ಲಘುಮೇರುರಯಂ ಮತಃ ।
ಊರ್ಧ್ವಪಙ್ಕ್ತಿಸ್ತು ಸಂಖ್ಯಾಂಕಯೋಗಾಃ ಸಂಖ್ಯಾನಿಗದ್ಯತೇ ॥ ೩೫ ॥

ಲಘುಮೇರುಕೊಷ್ಠಪಙ್ಕ್ತಿಃ ಪ್ರಾಗ್ವದಾದ್ಯಾಪತಾಲಿಖೇತ್ ।
ಯೋಗಮಂತ್ಯಸ್ಯ ತುರ್ಯಸ್ಯ ಷಷ್ಠಾಂತಸ್ಯತಮಾರ್ಧ್ವತಃ ॥ ೩೬ ॥

ಅಥೋಗೋಪಾಂತ್ಯಯುಕ್ತಸ್ಯ ತ್ರೈರಂಕೈರೂರ್ಧ್ವಪಙ್ಕ್ತಿಗೈಃ ।
ಲಘುಹೀನಾದುಪಕ್ರಮ್ಯ ಚೈಕದ್ವ್ಯಾದಿಲ ಸಂಯುತಾಃ ॥ ೩೭ ॥

ಸರ್ವಲಾಂತಾಃ ಕ್ರಮಾದ್ಯೋಗಾಃ ಸಂಖ್ಯಾಸರ್ವಾಂಕ ಸಂತತಃ
ಗುರುಮೇರೊವಥಪಙ್ಕ್ತಿಃ ಪರಾಕೊಷ್ಠ ತ್ರಯೊಮಿತಾ ॥ ೩೮ ॥

---

1 ಕಾಟು ಹೊಡೆದಿದೆ. 2 ಓಲೆಯ ಹಿಂಭಾಗ.

ತಚ್ಚತುಃಕೋಷ್ಠೈರ್ಬಿನಾಸ್ಯುಸ್ಸ್ವನ್ವಿx ಪೂರ್ವಾವಧೇಃ ಪರಾಃ
ಏಕಾಂಕವಂತ್ಯಚಾದ್ಯಾದ್ಯಕೋಷ್ಠಾಃ ಪ್ರಥಮಪಙ್ಕ್ತಿಗಾಃ
ದ್ವಿತೀಯೋದ್ವ್ಯಂಕವಾನ x x [1] ಂತ್ಯೋಪಾಂತ್ಯಷಷ್ಠಾಂಕಯೋಗಿನಃ ॥ ೩೯ ॥ [2]

ಶೇಷಕೋಷ್ಠಾಃ ಪರಾಸ್ತಾಸು ದ್ವಿತೀಯಾದಿಷು ಲಿಖ್ಯತೇ ॥ ೪೦ ॥

ಅಂತ್ಯ ದ್ವಿತೀಯ ಷಷ್ಠಾಂಕಾ ಅಧಸ್ತುರ್ಯಾಂಕ ಸಂಯುತಾಃ
ಲಘುಸ್ಥಾನೇ ಗುರುಜ್ಞೇಯಾಃ ಶೇಷಂತು ಲಘುಮೇರುವತ್ ॥ ೪೧ ॥

ಪ್ಲುತಮೇರಾವಧಃ ಪಙ್ಕ್ತಿಃ ಪಂಚಕೋಷ್ಠೋ ಗಿತಾಂ ಪರಾಃ ।
ತತ್ಪರಾಃ ಸ್ವಸ್ವಪೂರ್ವಾಂತ್ಯಃ ಷಟ್‌ಷಟ್ಕೋಷ್ಠೋಗಿತಾಸ್ತಥಾ ॥ ೪೨ ॥

ಅಧಃಪಙ್ಕ್ತೌತು ಷಷ್ಠಾಂಕಸ್ಥಾನೇ ತುರ್ಯೋತ್ರಯೋಜ್ಯತೇ ।
ತ್ರಯೋಗೋಂಚತಃರತಃ ಷಷ್ಠಯುಕ್ತಂಸ್ಯಾತ್ಪರಪಙ್ಕ್ತಿಷು ॥ ೪೩ ॥

ಪ್ಲುತೋ ಜ್ಞೇಯೋ ಗುರುಸ್ಥಾನೇ ಶೇಷಂತು ಗುರುಮೇರುವತ್ ।
ಸಂಯೋಗಮೇರೋರೂರ್ಧ್ವಾಸ್ಯುಶತಸ್ತಃ ಕೋಷ್ಠ ಪಙ್ಕ್ತಯಃ ॥ ೪೪ ॥

ಯಿಷ್ಟತಾಳದ್ದ್ರುತಮಿತ್ಯೈಃ ಕೋಷ್ಠೈರ್ಯುಕ್ತಾಸ್ತತಃ ಪರೇ ।
ದ್ವಿಪಙ್ಕ್ತಿ ಸ್ವಸ್ವಪೂರ್ವಾಂತೋದ್ವಿದ್ವಿಕೋಷ್ಠನಿತೇತತಃ ॥ ೪೫ ॥

ಪಙ್ಕ್ತೀಚೈಕೈಕಕೋಷ್ಠೋನೇತತಸ್ತಿಸ್ರಶಪಙ್ಕ್ತಯಃ ।
ಏಕಕೋಷ್ಠೋನಿತಾಃ ಪಶ್ಚಾದ್ದ್ವಿದ್ವಿಕೋಷ್ಠೋನಿತೇ ಪರೇ ॥ ೪೬ ॥

ಪಙ್ಕ್ತಿದ್ವೇ ಸ್ವಸ್ವಪೂರ್ವಾಭ್ಯಾಂ ತ್ರೈಕೈತೂನಿತೇ ಪರೇ ।
ಆದ್ಯಸ್ತು ಚತಸ್ರುಷ್ಟಾಸಾಂ ಕ್ರಮೇಣ ಸಕಲದ್ರುತಾಃ ॥ ೪೭ ॥

ಸಮಸ್ತ ಲಘವಃ ಸರ್ವಗುರವಃ ಸಕಲಪ್ಲುತಾಃ ।
ಏಕಾಂತಯುಕ್ತ ವಿಃಶೇಷಕೋಷ್ಠಾದ್ಯಾಸ್ಯಾತ್ಪರಾಪುನಃ ॥ ೪೮ ॥

ಸಂಯುಕ್ತ ವಿಷಮೈಃ ಕೋಷ್ಠೈಸ್ಸಮೈಸ್ತ್ವೇಕಾಂಕ ಸಂಯುತೈಃ ।
ಕರ್ತವ್ಯಗುರುಪಙ್ಕ್ತ್ಯಸ್ತ್ರಯಃ ಕೋಷ್ಠಾಸ್ಸ್ಥಿತಾಃ ॥ ೪೯ ॥

ತುರ್ಯಮೈಕಾಂಕಯುಕ್ತೈರೇವಂ ಚತುಃ ಕೋಷ್ಠಾ ಪರಾಪಿ ।
ಪ್ಲುತಪಙ್ಕ್ತೌಸಶೂನ್ಯಾಸ್ಯು ಪಂಚಕೋಷ್ಠಸ್ತುರೂಪವಾನ್ ॥ ೫೦ ॥

ಷಟ್ಕೋಷ್ಠಾ ತದ್ವದನ್ಯಾಸ್ಯುರ್ವಸುಪಙ್ಕ್ತಿಷ್ವನಂತ್ತರಂ ।
ಸಂಯೋಗಜಾಃ ಕ್ರಮಾದ್ವೈದಾದ ಲಘೂದ ಗುರೂಪಪಾಂ ॥ ೫೧ ॥

---

1 ಕಾಟು ಹೊಡೆದಿದೆ. 2 ಮೂ.ಪಾ. ೩ ಎಂದಿದೆ.

ಅಗೌ ಅಪಾದ್ಗಕೊಚೆತಿ ತದಾತ್ರ ಪ್ರಕ್ರಿಯಾತ್ವಿಯಂ ।
ಅಕ್ರೂಪದಿಷ್ಟಾದರಘ್ಯಸ್ಯಾದಘೊಘೊಂ ಕಪೆಲಸಂ ॥ ೫೨ ॥

ಅಂತ್ಯಪೂರ್ವದ್ವಿತೀಯಾಂಕ ತುರ್ಯಷಷ್ಠಸ್ತಥಾಕ್ರಮಾತ್ ।
ಯೊಗಾದಲಿಗಪೆಷುಸ್ಯಸ್ಮಿಷುಯುದ್ಯೊಗಜಾಖಿ(ಭಿ?)ಧಾ ॥ ೫೩ ॥

ಪಙ್ಕ್ತೌ ತದಂಕಯೊಗಾಂಕಂ ತತ್ಕೊಷ್ಠೆ ಸಂಭವಾಲ್ಲಿಭೆತ್ ।
ಲೆಖ್ಯಪಙ್ಕ್ತೌ ಪರಿಶ್ರೆಣೀಯಾತಿರಶೀತರಾಶ್ರಿತಾ ॥ ೫೪ ॥

ಏಕಾದಲಿಗಪಾನಾಂಸ್ಯುರಾದ್ಯಪಙ್ಕ್ತಿಚತುಷ್ಟಯೆ ।
ತೆಷು ಪ್ರಸ್ತುತಭೆದಸ್ತಾದ್ರುತಾದಿವ್ಯ(ರ್ತೈ?) ಸಂಶ್ರಿತಾನ್ ॥ ೫೫ ॥

ಅಂತಾ(?)ಗಹೀತಾಂಸ್ತೆಪ್ಯಂತ್ಯದ್ವಿತೀಯಕಾಂಕಾದ್ರುತಾದಿಷು ।
ಪ್ರಸ್ತುತೆಷು ವಿಷಯಸ್ತಾಸ್ಯುರಂತಾ ಸಂಭವೆತುಖಿಂ ॥ ೫೬ ॥

## ಪಾಠಾತ್ತರೋತ್ಪತ್ತಿ ವಿವರಣಂ[1]

ಶ್ಲೋಕ ॥ ಸದ್ಯೊಜಾತಾಂ ನಾಗಬಂಧ ಸ್ವಸ್ತಿತೊ ವಾಮದೇವತಃ ।
ಜಲಗ್ನಿಶ್ಚ ತಥಾಘೊರಾಚ್ಛುದ್ಧಿಸ್ತತ್ಪುರುಷಾಭಿಧಾತ್ ॥ ೧ ॥

ಆಸೀದೀಶಾನವಕ್ತ್ರಾಚ್ಚ ಸಮಸ್ಖಲಿತ ಸಂಜ್ಞಕಃ ।
ನನನಿನನಿನನನಿ । ಯಿತಿ ಸದ್ಯೋಜಾತಮುಖೊತ್ಪಂನ ನಾಗಬಂಧಃ ।[2]
ತತಕಿಟಕೀ । ಯಿತಿ ವಾಮದೇವಮುಖೊತ್ಪಂನ ಸ್ವಸ್ತಿಕಃ ।
ತಗನಿಡನಿಡದನಿದಾ ॥ ಯಿತ್ಯಘೊರಮುಖ್ಯೊತ್ಪಂನಜಲಗ್ನಃ ॥
ದರನಿಡನಿಡದನಿದಾ । ಯಿತಿ ತತ್ಪುರುಷಮುಖೊತ್ಪಂನ ಶುದ್ಧಿಃ
ನತೇಂನತೇಂತೇಂ । ಯಿತೀಶಾನಮುಖೊತ್ಪಂನ ಸಮಸ್ಖಲಿತಃ ।
ಕನಿಷ್ಠಾಂಗುಷ್ಠಸಂಯೊಗಾಚ್ಛೆಷಾಂಗುಲಿ ವಿವರ್ಜನಾತ್ ।
ಕೊಣಘೂತೊ ಹಸ್ತಪಾಟಃ ಶಾರ್ಙ್ಗದೆವೊದಿತೊಮತಃ ॥ ೧ ॥[3]
ಭುಂಭುಂದರಿ । ಭುಂಭುಂದರಿ । ಯಿತಿಕೊಣಘಾತಃ ।
ಸರ್ವಾಂಗುಲ್ಯಾಗ್ರಘಾತಶ ಸರ್ವಾಂಗುಲಿ ವಿವರ್ತನಾತ್ ॥
ಯಸ್ಯ ನಿಷ್ಪಾದಕಂ ಸೂತ್ರ ಸಂಭ್ರಾಂತಃ ಕಥಿತೋ ಯಥಾ ॥ ೨ ॥

---

1 2ನೇ ಓಲೆಯಲ್ಲಿದ್ದು ಓಲೆಪುಟದ ಉಲ್ಲೇಖವಿಲ್ಲ.
2 ಈ ಭಾಗ ಲಿಪಿಗಳಿರುವ ಓಲೆ ತುಂಡಾಗಿದೆ.
3 ಎರಡು ಬಾರಿ '೧' ಸಂಖ್ಯೆಯು ಉಲ್ಲೇಖವಿದೆ.

ಅದೆಂತೆಂದೊಡೆ ॥ ದರಿನಿಡದರಿನಿಡನಿನಿಡದ ॥

ಶ್ಲೋಕ ॥ ಚಲನಂ ಮಣಿಬಂಧಸ್ಯ ಪತಾಕಾಸ್ಯಾತಿಕಂಪನಂ ॥
ಪಾವಕಂ ಪ್ರೋಚ್ಯ ಜನಕೋ ಯಸ್ಯಾಸೌ ಪಿಪವೋ ಯಥಾ ॥ ೩ ॥

ದಪ್ಪೃದಪ್ಪೃ । ಭುಂಭಿಂದಪ್ಪೃ । ಭುಂಭುಂದಪ್ಪೆ । ಯಿತಿ ಪಿಪಮಃ ॥
ಉತ್ಪಲೋನಖಿರಾಘತೋಪಲಿ ಪದ್ಮಸ್ಯಜಾಯತೇ । ಕಪ್ರೆಂ ಕಪ್ರೆಂ ॥
ವಿರಳಾಂಗುಲಿ ಪರ್ವಾಖ್ಯಂ ಕ್ರಮೇಣ ಖಿಲಕಸ್ತದಾ ॥
ತಲ್ಲಕ್ಷಃ । ದನಿಡದನಿಡನಿಡ ॥ ಯಿಂತಿ ಖಿಲಕಃ ॥
ಯಸ್ತುದಕ್ಕೈಣಹಸ್ತೆಸ್ಯಾತ್ತರ್ಜನ್ಯಂಗುಷ್ಠ ಘಾತತಃ ।
ಕ್ರಮವ್ಯುತ್ಕ್ರಮಘಾತಾತು ವಾಮಹಸ್ತೇನ ರೆಫವತ್ ॥
ಕ್ರಮಾದ್ರೆಫೋರ್ಧ್ವಹಸ್ತಾಭ್ಯಾಂ ಪಂಚಹಸ್ತಪ್ರಜಾಯತೆ ॥
ಊರ್ಧ್ವಘತದ್ವಯಂತ್ಮತ್ವಾ ಕಳಹಸ್ತೇನ ಹನ್ಯತೆ ॥
ಯಥಾ ವಾದ್ಯಪುಟದ್ವಂದ್ವಂ ಸ್ಥೂಲಹಸ್ತಸ್ತದೊದಿತಃ ॥
ಯಿದರ ಲಕ್ಷ್ಯ ।
ಭುಂಭುಂದಭುಂಭುಂದ । ಯಿತಿ ಸ್ಥೂಲಹಸ್ತಃ ॥ – ॥

ಸಾರ್ಧಾರ್ಧ ಪಾಣಿರರ್ಧಾಭ್ಯಾಂ ತರಯೊಸ್ತಾಡನಾದ್ಭವೇತ್ ॥
ಇದು ಅರ್ಧಾರ್ಧ ಪಾಣಿಹಸ್ತಃ ॥
ಪುನಶ್ಚನಖಿರಾಗ್ರೇಣ ಪಾರ್ಶ್ವಪಾಣಿರುದಾಹೃತಃ ॥
ಅರ್ಧಪಾಣಿರ್ಭವೇದೇಕ ಕರಾಗ್ರಕೃ ॥ ತತಾಡನಾತ್ ॥
ಪ್ರಚಾಲಿನಾಭ್ಯಾಂ ಹಸ್ತಾಭ್ಯಾಂ ಸಮಕರ್ತರಿರೀರಿತಃ ॥
ಕ್ರಮೇಣ ತಾಡನಂ ದ್ವಾಭ್ಯಾಂ ಭವೇದ್ವಿಷಮಕರ್ತರಿ ॥ – ॥

ಅಂಗುಷ್ಠಾಂಗುಲಿಸಂಘಾತಾ ಹಸ್ತಯೋರ್ಯುಗಪತ್ತಥಾ ॥
ಪೀಡಯೇತಾಂ ಪುಟದ್ವಂದ್ವಂ ಸಮಪಾಣಿಸ್ತಥಾ ಭವೇತ್ ॥
ವ್ಯತ್ಯಯಾದಗ್ರತಾಹಸ್ತೌ ಸಾಂಗುಷ್ಠಾಂಗುಲಿಭಿಃ ಕ್ರಮಾತ್ ॥
ಯುಗ್ಮೈರ್ವಿಷಮಪಾಣಿಂ ಬ್ರೂತೆ ಶಂಕರಕಿಂಕರಃ ॥
ಸಮಪಾಣಿಸ್ತು ವಿರಳಾಂಗುಲಿತ್ವೆ ಪಾಣಿಹಸ್ತಕೆ ॥
ನಾಗಬಂಧೊ ವಿಪರ್ಯಾಸ ಪುಟಯೋಃ ಕರಘಾತಕಃ
ಪ್ರತ್ಯೇಕಂ ವಾ ಪುಟದ್ವಂದ್ವಂ ಕರಾಭ್ಯಾಂ ತಾಡನದ್ವಯಂ ॥
ಅಂಗುಲ್ಯಗ್ರ ಪೀಡನತ್ವಾಂಗುಷ್ಠೇನ ಪರಿಘಾತನಾತ್ ॥
ವಾಮೇನ ಪೀಡಯೇದ್ಯಸ್ತು ದಂಡಹಸ್ತೊಭಿಧೀಯತೆ ॥

ಯಿಂದರ ಲಕ್ಷಃ ॥
ಭಭಣ ಭಭಣ । ಭೆಂದ್ರುಃ । ಭೆಂದ್ರುಃ ॥
ಭೆಂದ್ರುಃ । ಭೆಂದ್ರುಃ । ಭೆಂದ್ರುಃ ಟರಿಟು ॥ – ॥

ಸಮುತ್ಪಾತ್ಪಾಟಹಸ್ತಾನಾಮಂಗುಲೀನಭಿರಾಹತ್ಯಃ ।
ದ್ರುಶ್ಯತೆ ಯತ್ರ ತತ್ಪ್ರಾಪುಃ ಪಾಟಃ ಸಮನಖಾಭಿಧಂ ॥
ಯಿಂದರ ಲಕ್ಷ ॥
ರಹರಹನ ರಕಿಟ ಧಿಕ್ಕಿಟ ತದಿಕಿಟೇಂ ॥
ಹೇಂ ಹೇಂ ಟೇಂ ಹೇಂದ್ರುಃ । ಯಿಂದು ಸಮನಖಿ ॥ – ॥

ಅವಷ್ಟಂ ಖ್ಯಾಂ ಪುಟಂ ವಾಮಪಾಣಿನಾ ತರ್ಜನೀ ಹತಃ ॥
ಬಿಂದುರುತ್ಪದ್ಯತಪ್ರೊಕ್ತಮಿಂತಿ ಸೊಡ್ಡಾಲಸೂನುನಾ ॥
ಸಮವಷ್ಟಭ್ಯವಾಮೆನ ಪುಟಂ ದರ್ಪಣ ಪಾಣಿನಾ ॥
ಅಪೀಡನಂ ವಾದಯೆತ್ತದುಂಪವಾಮೀಡಹಸ್ತಕಃ ॥ – ॥
ಸಮಪಾಣಿರವಿಶ್ರಾಂತವಿರಳಾಂಗುಲಿಘಾತತಃ ॥
ಯಿದರ ಲಕ್ಷ್ಯ—
ನನನಿನನಿತೊಂನಿದುಂನಿ । ನಹನಹ ಎಂ । ನಹಎಂ ॥
ಯಿತಿ ಹಸ್ತಪಾಡಬೆವಲಕ್ಷಣಂ ॥ – ॥ ಶ್ರೀ ॥

ದ್ರುತಸ್ತು ವಲಯಾಕಾರೋ ಲಘುರೂರ್ಧ್ವಶರಾಕೃತಿಃ
ಗುರುರ್ವತ್ರ ಧನುರ್ಜ್ಞೇಯಂ ಪ್ಲುತಶ್ಚ ಸ ಶಿಖೊ ಭವೇತ್ ॥ ೧ ॥

ದೃತಾದಿಂದುರ್ಲಿಘೊರ್ನೆತ್ರಂಡಲಾಭ್ಯಾಮುನ್ನಿರುದ್ಭವಃ ॥
ರುತುಸಂಖ್ಯಾ ಗುರೋರ್ಜಾತಾದಗುರುಭ್ಯಾಂ ದಶಸ್ಮೃತಾಃ ॥ ೨ ॥

ಪ್ಲುತಾನ್ನವದಶಪ್ರೊಕ್ತಾ ತ್ರಯತ್ರಿಂಶಪ್ರೊದ್ಭವಾಃ ॥
ಕ್ರಮಾಲ್ಲಘುಪ್ಲುತಾಭ್ಯಾಂಜ ಷಷ್ಟಿತಾಳಸ್ಸಮುದ್ಭವಾಃ ॥ ೩ ॥

ಷಡುತ್ತರಶತಂಚೈವ ದಲಿಪಾಖ್ಯಾಂ ಸಮುದ್ಭವಾಃ ॥
ಶತೈತನವತಿಶ್ಚಯ್ಯುಗಪಾಖ್ಯಾಂ ಚೆತಿ ಕಥ್ಯತೆ ॥ ೪ ॥

ವ್ಯೊಮಾಬ್ಧಿವನ್ನೀಸಂಖ್ಯಾಚದಗಪೃಶ್ಚ ಸಮುದ್ಭವಃ
ವ್ಯೊಮೆಂದುರುತುಸಂಖ್ಯಾಕಂ ಪ್ಲುತಾಭ್ಯಾಂಚೆತಿ ಕಥ್ಯತೆ ॥ ೫ ॥

ನಿಧಿರ್ವಸುವ್ಯೊಮಶಶೀದಪಪೃಶ್ಚ ಸಮುದ್ಭವಃ ॥
ವ್ಯೊಮಬಾಣನಿಧಿಶ್ಚಂದ್ರೊಲಪಪೃಶ್ಚ ಸಮುದ್ಭವಃ ॥ ೬ ॥

ಶರವಸ್ವಬ್ಧಿವನ್ಹೀಶ್ಚ ದಲಿಪಪ್ಲುತ ಸಂಭವಃ ॥
ರುತ್ವನ್ನಿನೆತ್ರುಭೂತವೊಗಪಪ್ಲೃಶ್ಚ ಸಮುದ್ಭವಾಃ ॥ ೭ ॥

ಯಿತ್ಯೆವಂ ತಾಳಸಂಜ್ಞಾಚ ನಿರ್ವಿತಾ ಪೂರ್ವಸೂರಿಭಿಃ ॥
ಅನುದ್ರುತಶ್ಚತಿಶ್ಚೆತಿ ದ್ರುತಶ್ಚತಿ ತಿರುಚ್ಚತೆ ॥ ೮ ॥

ಲಘುಸ್ತಿತಿತಿಶ್ಚೆತಿ ಗುರೊರಪ್ಪಾಪ್ರಕೀರ್ತಿತಾಃ ॥
ಪ್ಲುತಸ್ಯ ದ್ವಾದಶಪ್ರೊಕ್ತಾ ಕಾಕಪಾದೆಚ ಷೊಡಶ ॥ ೯ ॥

ಷಂಣಾಯನಾದ್ರುತಾಧೀನಂ ದೆಶೀ ಲಘ್ವಕ್ಷರಃ ಕ್ರಮಾತ್ ॥ ೩೩ ॥

ಅಥ ಸಂಖ್ಯಾಸ್ವರೂಪಂಚವಕ್ಷ್ಯತೆ ಶಾಸ್ತ್ರನಿಶ್ಚಿತಂ
ತಸ್ಮಿನ್ನಂತ್ಯೊಪಾಂತತುರ್ಯಘ(ಷ?)ಷ್ಠ್ಯ ಸಂಖ್ಯಾಕ್ರಮಸ್ಯಚ ॥ ೧ ॥

① ತಾಳಪ್ರಸ್ತಾರ

| | | | | | | | | | | | | |
|---|---|---|---|---|---|---|---|---|---|---|---|---|
| 0 | ೧ | | | | | | | | | | | |
| 1 | 00 | ೨ | ಲಗ | ದ್ರು೨ | ಲ೩ | | | | | | | |
| ೨ | 01 | 10 | 000 | ೩ | ಲ೨ | ದ್ರು೫ | ಟಳ೭ | | | | | |
| ೩ | 11 | 001 | 010 | 100 | 0000 | ೬ | ಗುಲಗ | ಲ೫ | ದ್ರುಗ೩ | ಅಂಗ೬ | | |
| ೦೫ | 011 | 101 | 0001 | ೫೦ | 110 | 0010 | 0100 | 1000 | 00000 | ಗಂ | ಗು೭ಲಗಂ | |
| ೬ | 1೯ | 00೯ | ೯1 | 111 | 0011 | 0101 | 1001 | 00001 | 0100 | 0110 | 1010 | |
| 00010 | ೯00 | 1100 | 00100 | 01000 | 10000 | 000000 | ಗ೯ | ಪ್ಲುತ ಗು೫ ಲ೨ ದ್ರು೪೪ | ಅಂತ್ಯ ೧೫೨ | | | |

ಅಂತ್ಯೋಧ್ಯೋರ್ವಪಾಂತ್ಯತುರ್ಯರ್ಗಾಶ್ಚ ಷಷ್ಠಃ ಪಾತಾಳಸಂಜ್ಞಕಃ
ಶುದ್ಧ ಪಾತಾಳಸಂಜ್ಞಾಯಾಂ ದೃತಶ್ಚಾ ದ್ರುತ ಏವಚ ॥ ೨ ॥

ಪಾತಾಳಾಂತ್ಯೋಪಾಂತ್ಯ ತುರ್ಯಷಷ್ಠಃ ಪಾತಾಳ ಸಂಜ್ಞಕಃ ॥
ಸರ್ವ ಪಾತಾಳ ಸಂಜ್ಞಾಯಾಂ ದ್ರುತಶ್ಚ ಪ್ಲುತ ಏವಚ ॥ ೩ ॥

ತ್ರಿಯೋಗಜಾಶ್ಚಯೆ ಭೇದಾಶ್ಚತುರ್ಯೋಗ ಭವಾಶ್ಚಯೆ ।
ತತ್ಪಜ್ಞಾನಾಮು ವಿಜ್ಞೇಯಮೇವಮೇವಾಂಕಪೂರಣಂ ॥ ೪೭ ॥

1 ೩೫೮ ರ ಕೆಳಭಾಗದಲ್ಲಿ ಚಿಕ್ಕಲಿಪಿಯಲ್ಲಿ ೩೫೦ ಎಂದಿದೆ. (ಮೂ.ಪಾ.)

2 ೩೪೭೦೦ ?

ಕಿಂತುತ್ರಿಯೊಗಜಾ ಭೆದಾಯಃತ್ರಯಸ್ಯುರ್ದ್ವಿಯೊಗಜಾಃ ॥
ತೆಷಾಂ ಸನ್ನಿಹಿತಾಂ ತಾನಾಂ ಪ್ರಾಗುತ್ಕ್ರೊಂಕ ವಿಪರ್ಯಯಃ ॥ ೫೭ ॥

ಚತುರ್ಯೊಗತು ಚತ್ವಾರೊಯೆಸ್ಯುರ್ಭೆಧಾಸ್ಯಯೊಗಜಾಃ ॥
ತದಂಕೆಷ್ವೆವಮೂಲೋರ್ಕ್ತಸ್ಯಾ ದ್ವಿಪರ್ಯಯಃಯೊ ಗಜಃ ॥ ೫೮ ॥

ಯೆ ಚತ್ವಾರಸ್ತ್ರಿಯೊಗೊಡ್ಯಾಶ್ಚತುರ್ಯೊಗೊಷ್ಟ ಪಂಚವಾಃ ॥
ಭೆದಾಸ್ತೆ ಪಙ್ಕ್ತಿಷುಜ್ಞೆಯಾಃ ಕ್ರಮಾದನ್ಯಸು ಪಂಚಸು ॥ ೫೯ ॥

ದಲಗಾ । ದಲಪಾ । ಶ್ಚಾಥ । ದಗಪಾ । ಲಗಪಾಃ ಕ್ರಮಾತ್ ॥
ತ್ರಿಯೊಗಜಾಶ್ಚತುರ್ಯೊಗೊದ್ಭವಾದಲಗಪಾಯಿತಿ ॥ ೬೦ ॥

ಎಷಾಂ ಸಂಯೊಗವೆರಸ್ಯಾದತ್ಕ್ರೊಜ್ಞೆಯಃಪಃಥೊಜ್ಝಿತೆ ॥
ತಿರ್ಯಕ್ಪಙ್ಕ್ತಿಸ್ಥಕೊಷ್ಠಾಂ ಕ್ರಸ್ತ್ಯಸ್ತ್ಯಸ್ವರ್ಗದುತ್ತಾದಯಃ ॥ ೬೧ ॥

[illegible]

| ೦ | । | [illegible] | [illegible] | [illegible] | [illegible] | [illegible] | [illegible] | [illegible] |
|---|---|---|---|---|---|---|---|---|
| ೧ | ೨ | ೩ | ೬ | ೧೦ | ೧೯ | ೩೩ | ೬೦ | ೧೦೮ |
| ೧ | ೨ | ೪ | ೧೦ | ೨೨ | ೪೪ | ೯೧ | ೧೮೮ | [illegible] |



೮೩

6. ಗುರು ಮೇರುಃ

| | | | | | | | |
|---|---|---|---|---|---|---|---|
| | | | ಽ | ೦ಽ | ಽ | ೦ಽ | ೧ |
| ೦ | । | ೦। | ೧ | ೨ | ೫ | ೧೦ | ೨೦ |
| ೧ | ೨ | ೩. | ೫ | ೮ | ೧೩ | ೨೧ | ೩೪ |

7. ಪ್ಲುತಮೇರುಃ

| | | | | | | | | |
|---|---|---|---|---|---|---|---|---|
| | | | | | ಽ | ೦ಽ | ।ಽ | ೦।ಽ |
| ೦ | । | ೦। | ಽ | ೦ಽ | ೧ | ೨ | ೪ | ೧೦ |
| ೧ | ೨ | ೩ | ೬ | ೧೦ | ೧೮ | ೩೧ | ೫೫ | ೯೬ |

8. ಸಂಯೋಗಮೇರುಃ

| | | | | | | | | | | | | | | |
|---|---|---|---|---|---|---|---|---|---|---|---|---|---|---|
| ೧ | ೦ | ೦ | ೦ | | | | | | | | | | | |
| ೧ | ೧ | ೦ | ೦ | ೦। | | | | | | | | | | |
| ೧ | ೦ | ೦ | ೦ | ೨ | | | | | | | | | | |
| ೧ | ೧ | ೧ | ೦ | ೩ | ೦ಽ | | | | | | | | | |
| ೧ | ೦ | ೦ | ೦ | ೨ | ೨ | ೦ಽ | ।ಽ | | | | | | | |
| ೧ | ೧ | ೦ | ೧ | ೧೧ | ೩ | ೦ | ೨ | ।ಽ | ಽಽ | ೦।ಽ | | | | |
| ೧ | ೦ | ೦ | ೦ | ೨೦ | ೪ | ೨ | ೦ | ೦ | ೦ | ೬ | | | | |
| ೧ | ೧ | ೧ | ೧ | ೩೩ | ೫ | ೩ | ೩ | ೨ | ೧ | ೧೨ | ೦।ಽ | | | |
| ೧ | ೦ | ೦ | ೦ | [illegible] | ೯ | ೮ | ೦ | ೦ | ೦ | ೨೨ | ೬ | | | |
| ೧ | ೧ | ೦ | ೦ | [illegible] | [illegible] | ೮ | ೩ | ೩ | ೨ | ೫ | ೧೨ | ೦ಽಽ | | |
| ೧ | ೦ | ೦ | ೦ | [illegible] | [illegible] | ೬ | ೦ | ೧ | ೦ | [illegible] | [illegible] | ೬ | ।ಽಽ | |
| ೧ | ೧ | ೧ | ೧ | [illegible] | [illegible] | ೬ | ೧೧ | ೪ | ೦ | [illegible] | [illegible] | ೧೪ | ೬ | ೦।ಽಽ |
| ೧ | ೦ | ೦ | ೦ | [illegible] | [illegible] | ೧೧ | ೦ | ೦ | ೦ | [illegible] | ೧೨ | ೨೦ | ೦ | ೨೪ |

ವಾಸ ಲಕ್ಷಣಂ ॥

ಅಷ್ಟಾದಶೋಂಗುಲಶ್ಚಯವ್ಯಾಪಾದ್ಯೋಯಸ್ತಸ್ಯ ಲಕ್ಷಣಂ ॥
ದ್ವಾದಶಾಂಗುಲಕಶ್ಚಯವ್ಯಾಪ್ಯಾದಿತ್ಯೋವಾಸಕಸ್ತಥಾ ॥ ೧ ॥

---

* ಈ ಭಾಗ ಮಸಿವ್ಯಾಪನೆಯಿರುವುದರಿಂದ ಲಿಪಿಯು ಅಸ್ಪಷ್ಟವಾಗಿದೆ.

ಏಕಾದಶಾಂಗುಲಿಯುಕ್ತಶ್ಚ ರುದ್ರವಾಸಶ್ಚನಾಮಕಂ ॥
ದಶಾಂಗುಲಶ್ಚದಿಗ್ವಾಸೊ । ದೇಶೀವಾಸೊ ನವಾಂಗುಲಃ ॥ ೨ ॥

ಅಷ್ಟಾಂಗುಲಶ್ಚ ದಿಗ್ವಾಸಃ ಸಿಂದುಸ್ವಪ್ತಾಂಗುಲಸ್ತಥಾ ॥
ಷಡಂಗುಲಃ ಕೂರ್ಮವಾಸಃ ಪಂಚಾಂಗುಲಿರಘೋರಕಃ ॥ ೩ ॥

ಚತುಷ್ಕೊಬ್ರಹ್ಮವಾಸಶ್ಚ ತ್ರ್ಯಂಗುಲಶ್ಚಂದ್ರವಾಸಕಃ ॥
ಇವಕ್ಕೆ ದಂಡಗಳು । ಶ್ರೀಗಂಧ । ರಕ್ತಚಂದನ । ಖದಿರವೇಣು । ಅಂತ್ತು ಬಗೆ ೪ ॥



---

**ಉಪಸಂಹಾರ.**

ಕೆಳದಿ ಸಂಗ್ರಹಾಲಯದಲ್ಲಿರುವ ಹಸ್ತಪ್ರತಿ ಭಂಡಾರದಲ್ಲಿ ಉಪಲಬ್ಧವಿರುವ 'ತಾಳಪ್ರಸ್ತಾರ ಲಕ್ಷಣ' ಕೃತಿಯು 'ನೂರೊಂದು ತಾಳಶ್ಲೋಕದ ಮುಂದೆ' ಎಂದು ಕನ್ನಡ ಭಾಷೆಯಿಂದ ಆರಂಭಗೊಳ್ಳುತ್ತದೆ. ಸುಮಾರು ೧೪ ಸಾಲುಗಳೂ ೬೭ ಅಕ್ಷರಗಳಿಂದಲೂ ಕೂಡಿದ ಈ ಕೃತಿಯ ಪಾಠ್ಯಭಾಗವು ಸಂಸ್ಕೃತದಲ್ಲಿದೆ. ಮಧ್ಯೆ ಅಪರೂಪವಾಗಿ ಕನ್ನಡ ಭಾಷೆಯೂ ಬಳಸಲ್ಪಟ್ಟಿರುವುದು ಕಂಡುಬರುತ್ತದೆ. ಕೇವಲ ಮೂರು ಓಲೆಗಳಿರುವ ಕೃತಿಯ ಯಾವ ಭಾಗದಲ್ಲಿಯೂ ಕೃತಿಕಾರನ ಹಾಗೂ ಲಿಪಿಕಾರನ ಉಲ್ಲೇಖವು ಕಂಡುಬಾರದಿರುವುದು ದುರ್ದೈವ. ಆದರೆ ಕೆಳದಿ ಆಸ್ಥಾನ ಕವಿಯ ಪೀಳಿಗೆಯವರಲ್ಲಿ ಸಂಗೃಹೀತವಾಗಿದ್ದುದರಿಂದ ದಿ॥ ಎ. ಆರ್. ಕೃಷ್ಣಶಾಸ್ತ್ರಿಗಳೇ ಉಲ್ಲೇಖಿಸಿದಂತೆ ಕವಿ ಲಿಂಗಣ್ಣನೇ ಲಿಪಿಕಾರ ಅಥವಾ ಗ್ರಂಥ ಸಂಪಾದನಕಾರನಾಗಿದ್ದಿರಬಹುದೆಂದು ಊಹಿಸಲು ಅವಕಾಶವಿದೆ.* ಕೃತಿಯಲ್ಲಿ ಕಂಡುಬರುವ ಪಾತಾತ್ರರೋತ್ಪತ್ತಿ ವಿವರಣಂ, ಹಸ್ತಪಾದ ಭೇದ ಲಕ್ಷಣ, ತಾಳ ಪ್ರಸ್ತಾರ ಸಂಖ್ಯೆ ಹಾಗೂ ನಕ್ಷೆಗಳು, ವಾಸಲಕ್ಷಣ, ದಂಡಗಳು, ತಾಳಲಕ್ಷಣ-ಲಕ್ಷ್ಯಗಳು ಮುಂದಿನ ಸಂಶೋಧನೆಗೆ ಮಾರ್ಗಸೂಚಿಯಾಗಿವೆ ಎನ್ನಬಹುದಾಗಿದೆ.

ಕ್ರಿ.ಶ. ೧೬೯೭ ರಿಂದ ೧೭೧೪ರ ವರೆಗೆ ಕೆಳದಿ ಸಂಸ್ಥಾನವನ್ನಾಳಿದ ಕೆಳದಿ ಬಸಪ್ಪನಾಯಕನು ಸ್ವತಃ ವಿದ್ವಾಂಸನಾಗಿದ್ದು 'ಶಿವತತ್ತ್ವರತ್ನಾಕರ'ವೆಂಬ ವಿಶ್ವಕೋಶವನ್ನು ರಚಿಸಿದ್ದಾನೆ. ಈ ಗ್ರಂಥದ VIನೇ ಕಲ್ಲೋಲದ ನವಮ ತರಂಗದಲ್ಲಿ ಸಂಗೀತ ಶಾಸ್ತ್ರ

---

* ಎ.ಆರ್.ಕೃ ಅವರ ಕೆಳದಿ ನೃಪವಿಜಯ ಉಪೋದ್ಘಾತ ಹಾಗೂ ಕವಿಜಿಹ್ವಾಬಂಧನ ಗ್ರಂಥಗಳನ್ನು ನೋಡಿರಿ.

ಕೃತಿಯನ್ನು ಅಳವಡಿಸಿ, ಸಮಯ ಸಾರೋಕ್ತ ಏಕೋತ್ತರ ಶತತಾಲ, ಚಚ್ಚತ್ಪುಟಾದಿ ತಾಲ ಲಕ್ಷಣ, ಪ್ರಸ್ತಾರ, ಸಂಖ್ಯೆ, ನಷ್ಟ, ಉದ್ದಿಷ್ಟ, ಪಾತಾಲ ಲಕ್ಷಣ, ದ್ರುತಮೇರು ಲಕ್ಷಣ ಮತ್ತು ಕೋಷ್ಟ, ಲಘುಮೇರು, ಗುರುಮೇರು, ಪ್ಲುತಮೇರುಗಳ ಲಕ್ಷಣ ಹಾಗೂ ಕೋಷ್ಟಗಳು, ಸಂಯೋಗಮೇರು, ಮರ್ದಲಾದಿ ವಾದ್ಯ ಲಕ್ಷಣ, ಬ್ರಾಹ್ಮಣಾದಿ ಭೇದೇನ ವೃಕ್ಷಭೇದಾಃ, ಅನುಪಯುಕ್ತಾ ವೃಕ್ಷಾಃ, ಮರ್ದಲೇ ವರ್ಜ್ಯಚರ್ಮ, ಮೃದಂಗ ನಿರ್ಮಾಣಮ್. ಮರ್ದಲೋತ್ಪನ್ನ ವರ್ಣಾನಾಂ ಮೂಲ ಕಾರಣಮ್, ಮೃದಂಗಾಧಾರ ದೇವತಾಃ, ವಾಮ ಹಸ್ತಾಧಿದೇವತಾಃ, ದಕ್ಷ ಹಸ್ತಾದಿ ದೇವತಾಃ, ತಾಲ ಲಕ್ಷಣಮ್, ಕ್ಷುದ್ರಘಂಟಿಕಾ, ಶಾಸ್ತ್ರಪ್ರಸಿದ್ಧಾ ಮುಖ್ಯ ವಾದ್ಯ ಭೇದಾಃ, ಘನ ವಾದ್ಯ ಭೇದಾಃ, ತತವಾದ್ಯಭೇದಾಃ ಮುಂತಾದ ವಿವರಣೆಗಳನ್ನು ನೀಡಿದ್ದಾನೆ.[1] ಕೆಳದಿ ಸಂಗ್ರಹಾಲಯದ ಹಸ್ತಪ್ರತಿಯಲ್ಲಿ ವಿನೂತನ ಅಂಶಗಳು ಉಲ್ಲೇಖನಗೊಂಡಿರುವುದು ಕಂಡುಬರುವುದರಿಂದ ಸಂಗೀತ ವಿದ್ವಾಂಸರಿಗೆ ಮುಂದಿನ ಸಂಶೋಧನೆಗೆ ಮೂಲಸಾಮಗ್ರಿಯೋಪಾದಿಯಲ್ಲಿ ಈ ಹಸ್ತಪ್ರತಿಯು ಸಹಕಾರ ನೀಡಬಲ್ಲುದಾಗಿದೆ. ಹಾಗೆಯೇ ಈ ಸಂಶೋಧನಾಲಯದಲ್ಲಿರುವ ಸಂಗೀತ ಚೂಡಾಮಣಿ,[2] ಸ್ವರಸಿದ್ಧಾಂತ ಚಂದ್ರಿಕಾ, ವೇಲಾಪುರೀ ಕೇಶವಸಂಗೀತಾ ಹಾಗೂ ಸಂಗೀತ ಕೃತಿಗಳು, ಪುರಂದರದಾಸರ, ವೈಕುಂಠದಾಸರ ಅಪ್ರಕಟಿತ ಕೀರ್ತನೆಗಳು, ಕೆಳದಿ ವೆಂಕಣ್ಣ ಕವಿಯ ಕೀರ್ತನೆಗಳು[3] ಮುಂತಾದ ಉಪಯುಕ್ತ ಸಂಗೀತ ಕೃತಿಗಳು ಅಪಾರವಾದ ಮೂಲ ಸಾಮಗ್ರಿಗಳು ಹಾಗೂ ಆಕರಗಳನ್ನು ನೀಡಬಲ್ಲವಾಗಿವೆ.

---

1 ಶಿವತತ್ತ್ವರತ್ನಾಕರ (ಕೆಳದಿ ಬಸವರಾಜ ಕೃತ), (ಮೈ.ಪ್ರಾ.ಸಾ. ಪ್ರಕಟಣೆ) ಸಂ. I, ಕ vi, ತ. 9. (1965)

2 ಮೈಸೂರಿನ ಶ್ರೀ ವರಲಕ್ಷ್ಮೀ ಅಕಾಡಮಿ ಗ್ರಂಥಭಂಡಾರದಲ್ಲಿಯೂ ಜಗದೇಕಮಲ್ಲನ ಸಂಗೀತ ಚೂಡಾಮಣಿ ಹಸ್ತಪ್ರತಿಯಿದೆ—ಶಾರ್ಙ್ಗದೇವ ವಿರಚಿತ ಸಂಗೀತ ರತ್ನಾಕರ ಸಂ. ೧ ಭಾಗ ೧ ಮೈ.ವಿ.ವಿ. 1968, ಅನುಬಂಧ ನೋಡಿರಿ.

3 ಕೆಳದಿ ಶ್ರೀ ರಾಮೇಶ್ವರ ದೇವರ ಅಂಕಿತದಿಂದ ಕೂಡಿದ ಈ [illegible] ಕೃತಿಯು ಬೆಂಗಳೂರು ವಿಶ್ವವಿದ್ಯಾಲಯದಿಂದ 1977ರಲ್ಲಿ ಪ್ರಕಟವಾಗಿದೆ. (ಸಂ.: ಕೆಳದಿ ಗು.ರಾ.ಜೋ.)

# ಗ್ರಂಥಾವಲೋಕನ

## ದಿವಂಗತ ಎ. ಶಾಂತಿರಾಜ ಶಾಸ್ತ್ರಿಗಳವರ ಜನ್ಮಶತಾಬ್ಧಿಯ ಸ್ಮಾರಕ ಪ್ರಕಟನೆಗಳು

ಕೀರ್ತಿಶೇಷ ಎತರ್ಜರು ಶಾಂತಿರಾಜ ಶಾಸ್ತ್ರಿಗಳು ಜೈನ ಸದ್ಗೃಹಸ್ಥರಲ್ಲಿ ಪ್ರಮುಖರಾಗಿದ್ದವರು. ಜೈನಧರ್ಮವನ್ನು ಕುರಿತು ಅಧಿಕಾರಯುತವಾಗಿ ಮಾತಾಡಬಲ್ಲವರು. ಜೈನಧರ್ಮಗ್ರಂಥಗಳನ್ನು ನಿಷ್ಪಕ್ಷಪಾತವಾಗಿ ಸಂಪಾದಿಸಬಲ್ಲ ಸಾಮರ್ಥ್ಯವನ್ನೂ ಪಡೆದಿದ್ದರು. ಪ್ರಾಕೃತ, ಸಂಸ್ಕೃತ ಭಾಷೆಗಳನ್ನು ಆಳವಾಗಿ ಅಭ್ಯಸಿಸಿದ್ದವರು. ಶ್ರೀಯುತರ ಲೇಖನಿಯಿಂದ ಐವತ್ತಕ್ಕೂ ಮೀರಿ ಸಂಪಾದಿತ, ಅನುವಾದಿತ, ಸ್ವತಂತ್ರ ಕೃತಿಗಳು ಮೂಡಿ ಬಂದಿವೆ. ಶಾಸ್ತ್ರಿಗಳ ವಿದ್ವತ್ತಿನ ಆಳ ಅಗಲಗಳೂ, ಪ್ರಾಕೃತ ಸಂಸ್ಕೃತ ಭಾಷೆಗಳಲ್ಲಿ ಅವರಿಗಿದ್ದ ಪ್ರಗಲ್ಭ ಪಾಂಡಿತ್ಯವಷ್ಟೇ ಅಲ್ಲದೆ ಲೇಖಕರ ಪ್ರಗತಿಪರ ಧೋರಣೆಯು ಸ್ಪಷ್ಟಚಿತ್ರ ಕೃತಿಗಳಲ್ಲಿ ನಿಚ್ಚಳವಾಗಿ ಕಾಣುತ್ತವೆ. ಶಾಸ್ತ್ರಿಗಳ ಜನ್ಮಶತಾಬ್ದಿ ಆಚರಣೆಯ ಸ್ಮಾರಕವಾಗಿ ಬೆಂಗಳೂರಿನ ಪಂಡಿತರತ್ನ ಎ. ಶಾಂತಿರಾಜ ಶಾಸ್ತ್ರಿ ಟ್ರಸ್ಟ್ ಪ್ರಕಟಿಸಿರುವ ಆರು ಗ್ರಂಥಗಳ ಸಮೀಕ್ಷೆಯನ್ನು ಮುಂದೆ ಮಾಡಲಾಗಿದೆ.

(1) **ಜಿನಭಜನಸಾರ:** ಹೆಸರೇ ಹೇಳುವಂತೆ ಇದು ಕೀರ್ತನೆಗಳ ಸಂಗ್ರಹ. ಇಪ್ಪತ್ತನಾಲ್ಕು ತೀರ್ಥಂಕರರನ್ನು ಸ್ತುತಿಸುವ ಸಂಸ್ಕೃತ ಶ್ಲೋಕದಿಂದ ಕೃತಿ ಪ್ರಾರಂಭವಾಗಿದೆ. ಭಾಸ್ಕರ ಕವಿ. ಬಾಲಚಂದ್ರದೇವ, ಶಾಂತಿನಾಥ ಕವಿ ಮುಂತಾದವರ ಕೃತಿಗಳಲ್ಲಿ ಬರುವ ಜಿನ ಪ್ರಾರ್ಥನೆಗಳನ್ನು ಉಲ್ಲೇಖಿಸಿದೆ. ಅನಂತರ ಕೀರ್ತನೆಗಳ ಮಾದರಿಯಲ್ಲಿ ಅರ್ಹತ್ಪೂಜಾ, ಸರಸ್ವತೀ ಪೂಜಾ, ಗಣಧರ ಪೂಜಾ, ಜೋಗುಳ ಸ್ತುತಿ, ಸರಸ್ವತೀದೇವಿ ಮತ್ತು ಗೊಮ್ಮಟೇಶ್ವರರ ಶತನಾಮಾಷ್ಟ ಸ್ತೋತ್ರಗಳನ್ನು ಸಂಗ್ರಹಿಸಲಾಗಿದೆ. ಸುಮಾರು ಹದಿನಾರು ಪುಟಗಳ ಪರಿಶಿಷ್ಟದಲ್ಲಿ ಸಂಗೀತ ಸ್ವರಗಳನ್ನೂ, ನಿರಂಜನ ಸ್ತುತಿ, ಪಂಚನಮಸ್ಕಾರ ಸ್ತುತಿ ಹಾಗೂ ಸಮವಸರಣ ಚೂರ್ಣಿಕೆಯನ್ನು ಕೊಟ್ಟಿದೆ. ಮುನ್ನುಡಿಯಲ್ಲಿ ಸಂಗೀತದ ಮಹತ್ವವನ್ನು ಕುರಿತ ಮಾತುಗಳನ್ನು ಬೇರೆಬೇರೆ ಆಕರಗಳಿಂದ ಸಂಗ್ರಹಿಸಿ ಕೊಡಲಾಗಿದೆ. ಸಂಗ್ರಹಿತವಾಗಿರುವ ಪ್ರತಿಯೊಂದು ಕನ್ನಡ ಅಷ್ಟಕ, ಪದ–ಹಾಡಿಗೂ ರಾಗ–ತಾಳಗಳನ್ನೂ ಸೂಚಿಸಿದೆ. ಕನ್ನಡ ಸಂಸ್ಕೃತವಲ್ಲದೆ ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿನ ಜಿನಸ್ತುತಿಯ ಪದ್ಯಗಳನ್ನೂ ಕೊಡಲಾಗಿದೆ. ಆಸ್ತಿಕರಿಗೆ ಇದೊಂದು ಉತ್ತಮ ಗ್ರಂಥ.

(2) **ದ್ರವ್ಯಸಂಗ್ರಹ:** ಕನ್ನಡದಲ್ಲಿ ಜೈನಮತ ತತ್ವಗಳನ್ನು ಸುಲಭವಾಗಿ ಬೋಧಿಸುವ ಗ್ರಂಥ ಇಲ್ಲದಿದ್ದ ಕಾಲದಲ್ಲಿ ಆ ಕೊರತೆಯನ್ನು ತುಂಬಲು ಶಾಸ್ತ್ರಿಗಳು ಪ್ರಯತ್ನಿಸಿದ್ದರ ಫಲವೇ ದ್ರವ್ಯಸಂಗ್ರಹ. ಸಾಮಾನ್ಯವಾಗಿ ದ್ರವ್ಯ ಎಂದಾಕ್ಷಣ

ಥಟ್ಟನೆ ನಮ್ಮ ಕಣ್ಣಮುಂದೆ ನಿಲ್ಲುವುದು ಹಣ. ಈ ಅಂಶವನ್ನು ಮನಗಂಡ ಶಾಸ್ತ್ರಿಗಳು 'ದ್ರವ್ಯಸಂಗ್ರಹ' ಪದದ ಕೆಳಗೇ ಜೈನಸಿದ್ಧಾಂತ ಸಂಗ್ರಹಃ ಎಂದೂ ಕೊಟ್ಟಿದ್ದಾರೆ. ಇದು ಮಾಗಧಿ ಭಾಷೆಯಲ್ಲಿ ಶ್ರೀ ನೇಮಿಚಂದ್ರ ಸಿದ್ಧಾಂತ ದೇವರ ದ್ರವ್ಯ ಸಂಗ್ರಹ ಕೃತಿಯ ಅನುವಾದವಾಗಿದೆ.

ಜೈನ ಸಿದ್ಧಾಂತ ರೀತಿ ಲೋಕದಲ್ಲಿ ಜೀವ, ಪುದ್ಗಲ (ಜಡ), ಧರ್ಮ, ಅಧರ್ಮ, ಆಕಾಶ ಮತ್ತು ಕಾಲಗಳೆಂಬ ಆರು ಮೂಲವಸ್ತುಗಳು ಇವೆ. ಇವಕ್ಕೆ ಜೈನ ಸಿದ್ಧಾಂತದಲ್ಲಿ ಷಡ್ದ್ರವ್ಯಗಳೆಂದು ಕರೆಯುವರು. ಮಾಗಧಿ ಭಾಷೆಯ ಐವತ್ತೆಂಟು ಗಾಥೆಗಳಿಂದ ಆ ಷಡ್ದ್ರವ್ಯಗಳ ಭೇದ ಪ್ರಭೇದಗಳನ್ನು ಅನುವಾದಿಸಿ ಕೊಡಲಾಗಿದೆ. ಮೂಲಗಾಥೆಯ ಸಂಸ್ಕೃತಛಾಯೆಯನ್ನು ಅನ್ವಯಾರ್ಥ ತಾತ್ಪರ್ಯಗಳನ್ನೂ ಕೊಟ್ಟಿದ್ದಾರೆ. ಶಾಸ್ತ್ರಿಗಳ ಕನ್ನಡ ಶೈಲಿ ಪಾಂಡಿತ್ಯದ ಹಾದಿ ಹಿಡಿಯದೆ ಜನಸಾಮಾನ್ಯರತ್ತ ವಾಲಿರುವುದು ಗ್ರಂಥದ ವೈಶಿಷ್ಟ್ಯ.

(3) **ದ್ವಾದಶಾನುಪ್ರೇಕ್ಷೆ :** ಅನುಪ್ರೇಕ್ಷೆ ಎಂದರೆ ಮತ್ತೆ ಮತ್ತೆ ಚಿಂತಿಸುವುದು. ಚಿಂತಿಸಬಹುದಾದ ಶುಭಾಶುಭ ಅಥವಾ ಇಷ್ಟಾನಿಷ್ಟ ವಿಷಯಗಳು ಹಲವಾರಿದ್ದರೂ ಅನುಪ್ರೇಕ್ಷಾ ಶಬ್ದದಿಂದ ವ್ಯವಹರಿಸಲ್ಪಡುವ ವಿಷಯಗಳು ಹನ್ನೆರಡು. ಜೈನ ಸಿದ್ಧಾಂತ ರೀತ್ಯಾ ಅವನ್ನು ಅನಿತ್ಯ, ಅಶರಣ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿತ್ವ, ಆಸ್ರವ, ನಿರ್ಜರ, ಲೋಕ, ಬೋಧಿ ದುರ್ಲಭ, ಸಂವರ, ಧರ್ಮಸ್ವಾ-ಖ್ಯಾತ್ವ ಎಂದು ಕರೆಯುವರು. ಶಾಸ್ತ್ರಿಗಳು ಪ್ರತಿಯೊಂದು ಅನುಪ್ರೇಕ್ಷೆಗೂ ವಿಸ್ತಾರವಾದ ವ್ಯಾಖ್ಯಾನ ನೀಡಿದ್ದಾರೆ. ಅವರ ಲಲಿತ ಶೈಲಿಗೆ ಸರಳ ನಿರೂಪಣೆಗೆ ಆ ಕೃತಿಯಿಂದಲೇ ಒಂದೆರಡು ವಾಕ್ಯಗಳನ್ನು ಉಲ್ಲೇಖಿಸಲು ಇಚ್ಛಿಸುತ್ತೇನೆ "ವಿವೇಕಿಯಾದ ಮಾನವನು ನಾನು ಯಾರು ? ಎಂತಹ ಗುಣವುಳ್ಳವನು ? ಯಾವುದನ್ನು ಪಡೆಯತಕ್ಕವನು ? ಅದಕ್ಕೆ ಯಾವ ಸಾಧನವುಳ್ಳವನು ? ಎಂದು ಪ್ರತಿದಿವಸದಲ್ಲಿಯೂ ಪ್ರತಿ ಸಮಯದಲ್ಲೂ ವಿಚಾರ ಮಾಡಬೇಕು. ಆಗ ಈ ಪ್ರಶ್ನೆಗಳಿಗೆ ನಾನು ನಿತ್ಯ ಸಚ್ಚಿದಾನಂದ ಸ್ವರೂಪಿಯಾದ ಆತ್ಮನು. ನಾನು ಅನಂತಜ್ಞಾನದರ್ಶನ ಸುಖಾದಿ ಗುಣವುಳ್ಳವನು. ನಾನು ಕರ್ಮಶತ್ರುವಿನ ಬಂಧನವನ್ನು ದೂರ ಮಾಡಿ ಆತ್ಮೀಯ ಸ್ವರಾಜ್ಯವನ್ನು-ಸ್ವಸ್ವರೂಪವನ್ನೂ ಹೊಂದತಕ್ಕವನೆಂಬ ಉತ್ತರ ದೊರೆಯುತ್ತದೆ ....ಎಳ್ಳಿನೊಳಗಿರುವ ಎಣ್ಣೆಯು ಗಾಣವಾಡಿಸುವುದರಿಂದ ಬೇರೆಯಾಗುವಂತೆ ಕಲ್ಲಿನೊಡನೆ ಸೇರಿರುವ ಬಂಗಾರವು ಸಾಧನ ವಿಶೇಷಗಳಿಂದ ಬೇರೆಯಾಗಿ ಅಪರಂಜಿ-ಚಿನ್ನವಾಗುವಂತೆ, ಅನಾದಿಕಾಲದಿಂದಲೂ ಜಡ-ಕರ್ಮದೊಡನೆ ಸಂಯುಕ್ತವಾಗಿರುವ ಆತ್ಮನು ಸಾಧನ ವಿಶೇಷಗಳಿಂದ (ಪೂಜೆ, ಧ್ಯಾನ ಇತ್ಯಾದಿ) ಬೇರೆಯಾಗಿ ಶುದ್ಧ ಪರಮಾತ್ಮನಾಗಬಲ್ಲನು. ಇದಕ್ಕೆ ಬೇಕಾದ ಸಾಧನವಿಶೇಷಗಳಲ್ಲಿ ದ್ವಾದಶಾನುಪ್ರೇಕ್ಷೆಯೂ ಒಂದು". ಕೃತಿಯ ತಿರುಳು ಅಡಗಿರುವುದು ಇಲ್ಲಿ ಮೇಲ್ಕಂಡ

ಮಾತುಗಳಲ್ಲೇ. ಗಹನವಾದ ವಿಷಯವನ್ನು ದಿನನಿತ್ಯದ ಬದುಕಿಗೆ ಸಮೀಪವಾಗಿರುವ ನಿದರ್ಶನಗಳ ಮೂಲಕ ನಿರೂಪಿಸಿ ಸಾಮಾನ್ಯ ಓದುಗನನ್ನೂ ಶಾಸ್ತ್ರಿಗಳು ಸೂರೆಗೊಳ್ಳುತ್ತಾರೆ.

(4) **ಪರಮಾತ್ಮ ಬೋಧೆ:** 'ಆತ್ಮಹಿತಾಕಾಂಕ್ಷಿಗಳಾದ ಮುಮುಕ್ಷುಗಳು ಆತ್ಮಸ್ವರೂಪ ಜ್ಞಾನಭಂಡಾರವನ್ನು ತೆರೆದು ಪ್ರವೇಶಿಸಲು ಸಾಧನವಿಶೇಷವಾಗಿರುವ' ಇಪ್ಪತ್ತನಾಲ್ಕು ಸಂಸ್ಕೃತ ಶ್ಲೋಕಗಳ ಶಬ್ದಾರ್ಥ ಹಾಗೂ ತಾತ್ಪರ್ಯಗಳನ್ನೊಳಗೊಂಡ ಈ ಕೃತಿ ಅತ್ಯಂತ ಮಹತ್ವದ್ದಾಗಿದೆ. ಬ್ರಹ್ಮಾಂಡ ಅಪಾರ, ಅನಂತ. ಅಸಂಖ್ಯಾತ ವಿಷಯಗಳು ಮಾನವನಿಗೆ ಅಗೋಚರ. ಅಲ್ಪರಾದ ನಾವು ಅಣುವನ್ನೇ ಬ್ರಹ್ಮಾಂಡವೆಂಬ ಭ್ರಮೆಯಲ್ಲಿ ಬೀಗುತ್ತೇವೆ. ಕೋಟಿಸೂರ್ಯಸಮ ಪ್ರಭೆಯ ಸತ್ಯವನ್ನು ಕಾಣಲು ಅಶಕ್ತರಾದರೂ ಅದರ ಅಸ್ತಿತ್ವವನ್ನು ಅಲ್ಲಗಳೆಯುವಷ್ಟು ಉದ್ಧಟತನಕ್ಕೆ ಹೋಗುತ್ತೇವೆ. ಹುಟ್ಟುಕುರುಡನು ಸೂರ್ಯನನ್ನು ಹೇಗೆ ನೋಡುವುದಿಲ್ಲವೊ ಹಾಗೆ ಧ್ಯಾನಹೀನರು ತಮ್ಮ ದೇಹದಲ್ಲಿರುವ ಬ್ರಹ್ಮ-ಪರಮಾತ್ಮನ ಆನಂದರೂಪವನ್ನು ನೋಡುವುದಿಲ್ಲ. ಶಿಲೆಯ ನಡುವೆ ಸ್ವರ್ಣವೂ ಕ್ಷೀರದಲ್ಲಿ ಆಜ್ಯವೂ ತಿಲದ ಮಧ್ಯದಲ್ಲಿ ತೈಲವೂ ಶಕ್ತಿರೂಪದಿಂದ ಹೇಗಿರುತ್ತವೋ ಹಾಗೆಯೇ ಶಕ್ತಿರೂಪದಿಂದ ಶಿವ-ಪರಮಾತ್ಮಸ್ವರೂಪಿಯಾದ ಈ ಆತ್ಮನು ದೇಹಗಳ ಮಧ್ಯದಲ್ಲಿ ಇರುತ್ತಾನೆಂದು ತಿಳಿಯುವವನೆ ಪಂಡಿತ. ದೇಹವನ್ನು ತಪಕ್ಕೊಡ್ಡಿ ನಿರ್ವಿಕಲ್ಪ ಪರಮ ಸಮಾಧಿಪರನಾದರೆ ಸಿದ್ಧ-ಪರಮಾತ್ಮ ಪರಶಿವನು ವ್ಯಕ್ತನಾಗುವನೆಂದು ಯಾರು ತಿಳಿಯುತ್ತಾರೋ ಅವರು ವಿದ್ವಾಂಸರು–ವಿವೇಕಿಗಳು. ಹದಿನೈದು ಪುಟಗಳ ಈ ಪುಟ್ಟ ಪುಸ್ತಿಕೆಯಲ್ಲಿ ಜೀವಾತ್ಮ-ಪರಮಾತ್ಮರ ಸಂಬಂಧವನ್ನು ಉತ್ತಮವಾಗಿ ನಿರೂಪಿಸಲಾಗಿದೆ. ಆಸ್ತಿಕರಿಗೆ ಈ ಕೃತಿ ಮುಕ್ತಿಪಥದಂತಿದೆ.

(5) **ಜೈನಧರ್ಮದ ಸನಾತನತ್ವ:** ಹೆಸರೇ ಹೇಳುವಂತೆ ಈ ಕೃತಿ ಜೈನಧರ್ಮದ ಚೂಲಮೂಲಗಳನ್ನೂ ಪ್ರಾಚೀನತೆ ಪ್ರಭಾವಗಳನ್ನೂ ಪ್ರತಿಪಾದಿಸುತ್ತದೆ. ಕೆಲವು ಜೈನೇತರ ದಾರ್ಶನಿಕರು ಜೈನಧರ್ಮದ ಮಹತ್ವದ ಬಗ್ಗೆ ಆಡಿರುವ ಮಾತುಗಳನ್ನು ಶಾಸ್ತ್ರಿಗಳು ಕ್ರೋಡಿಕರಿಸಿದ್ದಾರೆ. ಜೈನಮತವು ತೀರಾ ಪ್ರಾಚೀನ ಹಾಗೂ ಶ್ರೇಷ್ಠ ವೆಂಬುದನ್ನು ಪ್ರತಿಪಾದಿಸಲು ಶಾಸ್ತ್ರಿಗಳು ಇತರ ಗ್ರಂಥಗಳಿಂದ ತಮ್ಮ ವಾದಕ್ಕೆ ಅನುಕೂಲವಾಗುವಂಥ ಮಾತುಗಳನ್ನು ಉದಾಹರಿಸಿದ್ದಾರೆ. ಜೈನಧರ್ಮದಲ್ಲಿ ಹುಳುಕನ್ನು ಕಂಡುಹಿಡಿಯುವವರಿಗೆ ಅಂಥದೇ ಹುಳುಕು ತಮ್ಮ ಧರ್ಮದಲ್ಲೂ ಇರುತ್ತದೆಂಬುದನ್ನು ಮರೆಯಬಾರದು—ಎಂದು ಶಾಸ್ತ್ರಿಗಳು ಎಚ್ಚರಿಸುತ್ತಾರೆ. ಚತುರ್ವೇದಗಳಲ್ಲಿ ಅಲ್ಲಲ್ಲಿ ಗಮನಾರ್ಹವಾಗಿ ಜೈನತೀರ್ಥಂಕರರ ಹೆಸರುಗಳು ಬರುವ್ವನ್ನು ಶಾಸ್ತ್ರಿಗಳು ಪ್ರಸ್ತಾಪಿಸಿ ಜೈನಮತದ ಬಗ್ಗೆ ಈ ಕೆಳಕಂಡ ನಿರ್ಧಾರಕ್ಕೆ ಬಂದಿದ್ದಾರೆ—ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಗಳೂ ಅನಾದಿನಿಧನ

ಗಳೆಂದೂ ಅಪೌರುಷೇಯಗಳೆಂದೂ ಅವುಗಳು ಕಾಲವಿಶೇಷದಲ್ಲಿ ಲುಪ್ತವಾದಾಗ ಪರಮೇಶ್ವರನು ತನ್ನ ಮುಖಕಮಲದಿಂದ ಪುನಃ ಅವುಗಳನ್ನು ಪ್ರಕಾಶಪಡಿಸುತ್ತಾನೆಂದೂ ದ್ವೈತಾದ್ವೈತಾದಿ ಮತೀಯರು ಹೇಳುತ್ತಾರೆ ಮತ್ತು ನಂಬುತ್ತಾರೆ. ಹೀಗೆ ವೇದಗಳು ಅನಾದಿನಿಧನಗಳೂ ಅಪೌರುಷೇಯಗಳೂ ಆದ ಮೇಲೆ ಅವುಗಳಲ್ಲಿ ಪ್ರತಿಪಾದಿತವಾಗಿರುವ ವೃಷಭಾದಿ ವರ್ಧಮಾನಾಂತ್ಯ ಚತುರ್ವಿಂಶತಿ ತೀರ್ಥಂಕರರೂ ಅವರಿಂದ ಪ್ರಕಾಶಿತವಾದ ಜೈನಮತವೂ ಅನಾದಿನಿಧನಗಳೆಂದೂ ಅಪೌರುಷೇಯಗಳೆಂದೂ ಸಿದ್ಧಗಳಾಗಿಯೇ ಆಗುವುವು.

(6) **ನಾರೀ-ಕರ-ದರ್ಪಣ :** 'ಮುಖವನ್ನು ನೋಡಿ ತಿದ್ದಿಕೊಂಡು ಅಲಂಕರಿಸಿಕೊಳ್ಳುವುದಕ್ಕೆ ಕೈಗನ್ನಡಿ ಸಹಾಯಕವಾಗಿರುವಂತೆ ಹೆಂಗಸರು ತಮ್ಮ ಆಚಾರ ವಿಚಾರ ನಡೆನುಡಿ ಮೊದಲಾದುವುಗಳನ್ನು ತಿದ್ದಿಕೊಂಡು ಸೀತಾ, ದ್ರೌಪದೀ, ಚೇಳಿನಿ ಮೊದಲಾದ ನಾರೀಮಣಿಯರಂತೆ ಆದರ್ಶ ಸ್ತ್ರೀಯರಾಗಿ ವಿಶಾಲ ಯಶಸ್ವಿನಿಯರಾಗಿ ಬಾಳಿ ಆತ್ಮಕಲ್ಯಾಣವನ್ನು ಸಾಧಿಸಿಕೊಳ್ಳುವುದಕ್ಕೆ ಈ ಹೊತ್ತಗೆಯು ಸಹಾಯಕವಾಗಿ ಕೈಗನ್ನಡಿಯ ಸಾಮ್ಯವುಳ್ಳುದಾಗಿರುವುದರಿಂದ ಇದಕ್ಕೆ 'ನಾರೀ-ಕರ-ದರ್ಪಣ' ಎಂದು ಅನ್ವರ್ಥವಾದ ಹೆಸರನ್ನಿಟ್ಟಿದೆ' ಎಂದು ಶಾಸ್ತ್ರಿಗಳು ಪೀಠಿಕಾ ಪ್ರಕರಣದಲ್ಲಿ ತಿಳಿಸಿದ್ದಾರೆ.

ಮಾನವ ಜನ್ಮ ಬಹು ದೊಡ್ಡದು. ಅದು ಬಂದಾಗ ಹಾನಿ ಮಾಡಿಕೊಳ್ಳದೆ ಪುನಃ ಅದೇ ಜನ್ಮ ಬರುವಂತೆ ನಡೆದುಕೊಳ್ಳಬೇಕು ಎಂದು ತಿಳಿಸಿ ಸ್ತ್ರೀಯರು ವಿವಾಹವಾಗುವತನಕ ವಿದ್ಯಾಭ್ಯಾಸ ಮಾಡಬೇಕು ಎನ್ನುತ್ತಾರೆ. ಸ್ತ್ರೀಯರಿಗೆ ಪ್ರೌಢವಿವಾಹ ನಿಷಿದ್ಧ ಎಂದು ಯಾವ ಧರ್ಮಶಾಸ್ತ್ರದಲ್ಲೂ ಹೇಳಿಲ್ಲ ಎಂದು ವ್ಯಾಖ್ಯಾನಿಸುವ ಶ್ರೀಯುತರು ವಿವಾಹದ ಅನಂತರ ಸ್ತ್ರೀ ವಿದ್ಯಾಭ್ಯಾಸಕ್ಕೆ ತಿಲಾಂಜಲಿ ಕೊಟ್ಟು ಗಂಡ ಮತ್ತು ಮಕ್ಕಳ ಯೋಗಕ್ಷೇಮದ ಕಡೆ ಹೆಚ್ಚು ಗಮನ ಕೊಡಬೇಕು ಎಂದು ಉಪದೇಶಿಸುತ್ತಾರೆ. ಗರ್ಭಿಣಿ ಸ್ತ್ರೀಯರಿಗಾಗಿ ಕೆಲವು ನಾಟೀ ಔಷಧೋಪಚಾರಗಳನ್ನು ಸೂಚಿಸುತ್ತಾರೆ. ತಾಯಂದಿರು ಎಳೆಯ ಮಕ್ಕಳನ್ನು ಹೇಗೆ ಎಚ್ಚರಿಕೆಯಿಂದ ನೋಡಿಕೊಳ್ಳಬೇಕೆಂಬುದನ್ನು ತಿಳಿಸಿದ್ದಾರೆ. ಗೃಹಕೃತ್ಯದ ಕಾರ್ಯಗಳು ಮುಗಿದ ಮೇಲೆ ಗೃಹಿಣಿಯರು ಉತ್ತಮ ಸಾಹಿತ್ಯ ಕೃತಿಗಳನ್ನು ಓದಬೇಕೆಂದು ಶಾಸ್ತ್ರಿಗಳು ಅಪೇಕ್ಷಿಸುತ್ತಾರೆ. ಶಾಸ್ತ್ರಿಗಳ ವಿಚಾರಧಾರೆ ಇಂದಿನ ಎಲ್ಲಾ ಮಹಿಳೆಯರಿಗೆ ಪೂರ್ಣವಾಗಿ ಹಿಡಿಸದಿದ್ದರೂ ಅರ್ಧದಷ್ಟು ವಿಚಾರವು ಎಲ್ಲಾ ಸ್ತ್ರೀಯರೂ ಒಪ್ಪುವಂಥದ್ದೆ ಆಗಿದೆ.

ಈ ಮೇಲ್ಕಂಡ ಎಲ್ಲಾ ಪುಸ್ತಕಗಳ ಮುದ್ರಣ ಸುಂದರವಾಗಿದೆ. ಅಲಭ್ಯವಾಗಿದ್ದ ಕೃತಿಗಳನ್ನು ಪ್ರಕಟಿಸಿದ್ದಕ್ಕಾಗಿ ಶಾಂತಿರಾಜಶಾಸ್ತ್ರಿ ಟ್ರಸ್ಟ್ ಅಭಿನಂದನೆಗೆ ಅರ್ಹವಾಗಿದೆ.

**ಎ. ವೆಂಕಟ ರಾವ್**

## ಶ್ರೀದೇವೀಶತಕ *

ದಕ್ಷಿಣ ಕನ್ನಡ ಜಿಲ್ಲೆಯ ಪುಣ್ಯಕ್ಷೇತ್ರಗಳಲ್ಲಿ ಒಂದಾಗಿರುವ ಕಟೀಲಿನ ಶ್ರೀ ದುರ್ಗಾ ಪರಮೇಶ್ವರೀ ದೇವಿಯ ಮಹಿಮೆಯನ್ನು ಬಣ್ಣಿಸುವ, ಸ್ತುತಿಸುವ ಭಕ್ತಿ ಸಾಹಿತ್ಯ ಕೃತಿಯಿದು. ನೂರೊಂದು ಭಾಮಿನಿ ಷಟ್ಪದಿ ಪದ್ಯಗಳಿಂದ ಕೂಡಿದೆ. ಪ್ರತಿಯೊಂದೂ 'ಭ್ರಮರಾಂಬಾ' ಎಂಬ ಮುದ್ರಿಕೆಯನ್ನುಳ್ಳುದಾಗಿದೆ. ಪದ್ಯಗಳೆಲ್ಲವೂ ಪ್ರಾಸ ಪಾದ ನಿಯಮಗಳಿಂದ ಕೂಡಿವೆ. ಅಲ್ಲಲ್ಲಿ ಶಬ್ದಾಲಂಕಾರ–ಅರ್ಥಾ-ಲಂಕಾರಗಳೂ ಸೊಗಸಾಗಿ ಬಂದಿವೆ. ಕನ್ನಡದ ಪದ್ಯಸಾಹಿತ್ಯಕ್ಷೇತ್ರದಲ್ಲಿ ಛಂದೋಬದ್ಧ ರಚನೆಗಳು ಬರಪೀಡಿತವಾಗಿರುವ ಈ ಕಾಲದಲ್ಲಿ ಬಂದಿರುವ ಹನಿಮಳೆಯಂತೆ, ಭಕ್ತಿ ಭಾವವುಳ್ಳ ಓದುಗರ ಮನಸ್ಸಿಗೆ ಈ ಶತಕ ತಂಪನ್ನೀಯುತ್ತದೆ.

ಇಲ್ಲಿಯ ಪದ್ಯಗಳು ಸರಳವಾಗಿ, ಸಹಜ ಕವಿತ್ವಗಳಾಗಿ ಮೂಡಿಬಂದಿವೆ. ತಕ್ಕ ಶಬ್ದಕ್ಕಾಗಿ ಪ್ರಾಸಕ್ಕಾಗಿ ತಡಕಾಡಿದಂತೆ ಕಂಡುಬರುವುದಿಲ್ಲ. ಲೋಕದ ಜನರ ಬಗ್ಗೆ ಕವಿಯ ಅನುತಾಪ ಹಾಗೂ ನೀತಿಭಾವ ವ್ಯಕ್ತಪಡುವ ಪದ್ಯವೊಂದು ಹೀಗಿದೆ :

ತನಗೆ ಸಿಕ್ಕದ ಸುಖವ ಪಡೆಯಲಿ
ಕೆನುತ ಮನದಲಿ ನಿತ್ಯ ಮತ್ಸರ
ಮನವ ತಾಳುವುದುಚಿತವಲ್ಲವಿದನ್ನು ತಿಳಿತಿಳಿದೂ
ಜನರು ಪರರನು ನಿಂದಿಸುತ ತಾ
ವನಘರೆನಿಸಲು ಯತ್ನಗೈಯುವ
ರೆನುತಲವರಲಿ ಕಿನಿಸ ತಾಳದೆ ಸಲಹು ಭ್ರಮರಾಂಬಾ (೧೨)

ನೀತಿಹೀನರ ನಡುವೆ ಇರತಕ್ಕ ಸತ್ಪುರುಷನಿಗೆ ಶ್ರೀದೇವಿಯೇ ರಕ್ಷಕಿಯೆಂಬ ಮಾತಿನ ಪದ್ಯ ಹೀಗಿದೆ—

ಮಾತುಮಾತಿಗೆ ವಾದಗೈಯುವ
ರೇತಕೆನ್ನುತಲರಿಯೆ ಭುವನದೊ
ಳೀ ತೆರದ ಜನರಿರಲು ಜೀವನ ಕಷ್ಟವಾಗಿಹುದು
ಸೋತೆವೆನ್ನುತಲೊಪ್ಪಲಾರದೆ
ಹೊತರಂದದೊಳರಚುತಿರುವಾ
ನೀತಿಹೀನರ ಮಧ್ಯೆಯೆನ್ನನು ಸಲಹು ಭ್ರಮರಾಂಬಾ (೨೬)

ಈ ಶತಕವನ್ನು ರಚಿಸಿರುವ ಕವಿ ಶ್ರೀನಿವಾಸಭಟ್ಟರು ಕಟೀಲಿನಲ್ಲಿ ಶಾಲಾ-ಧ್ಯಾಪಕರು ; ಯಕ್ಷಗಾನ ಕಲಾವಿದರು : ಹೆಸರಾಂತ ಸಹೃದಯ ಲೇಖಕರು ; ನೀತಿವಂತರು, ಭಕ್ತಾಗ್ರಣಿಗಳು. ಅವರು ಇದನ್ನು ಹಿಂದೆಯೇ ರಚಿಸಿದ್ದು 1970ರಲ್ಲಿ ಶ್ರೀದೇವಿಯ ಬ್ರಹ್ಮಕಲಶಾಭಿಷೇಕದ ನೆನಪಿನ ಸಂಚಿಕೆಯಲ್ಲಿ ಪ್ರಕಟವಾಗಿದ್ದಿತು. ಇದೀಗ ಪ್ರತ್ಯೇಕ ಪುಸ್ತಕರೂಪದಲ್ಲಿ ಸೊಗಸಾಗಿ ಅಚ್ಚಾಗಿ ಬಂದಿದೆ. ಕನ್ನಡದ ಶತಕಸಾಹಿತ್ಯಕ್ಕೆ ಇದೊಂದು ಹೊಸ ಕೊಡುಗೆ.

**ಟಿ. ಕೇಶವ ಭಟ್ಟ**

* ಶ್ರೀ ದೇವೀಶತಕ—ಕವಿ : ಪು. ಶ್ರೀನಿವಾಸಭಟ್ಟ. ಪ್ರ : ಯುಗಪುರುಷ ಪ್ರಕಟನಾಲಯ, ಕಿನ್ನಿಗೋಳಿ 574150 (ದ.ಕ.) ಪುಟಗಳು : 34 (½ ಡೆಮ್ಮಿ). ಬೆಲೆ : ರೂ. 5=00 (1985).

## ರಾವಣ ಚರಿತೊ *

ತುಳು ಭಾಷೆಯಲ್ಲಿ ಹೊಸತಾಗಿ ರಚಿತವಾಗಿರುವ ಯಕ್ಷಗಾನ ಪ್ರಸಂಗದ ಪದ್ಯ ಕೃತಿ 'ರಾವಣ ಚರಿತೊ'. ರಾವಣನೇ ಇಲ್ಲಿ ಪ್ರಧಾನ ಪಾತ್ರ. ಇದರಲ್ಲಿ ಬರುವ ವಸ್ತು-ಘಟನೆಗಳಿಗೆ ಜಾನಪದದಲ್ಲಿರುವ ರಾಮಾಯಣ ಕಥಾಂಶಗಳು ಮಾತ್ರವಲ್ಲದೆ, ಕಂಬ ರಾಮಾಯಣ, ಪಂಪ ರಾಮಾಯಣ, ಅದ್ಭುತ ರಾಮಾಯಣ, ಹಿಂದಿಯ ಖ್ಯಾತ ಕವಿ ಮೈಥಿಲೀ ಶರಣ ಗುಪ್ತರ ಸಾಕೇತ-ಪಂಚವಟಿ ಕಾವ್ಯಗಳು ಆಕರಸಂಪತ್ತು ಗಳಾಗಿವೆ. ಆದುದರಿಂದಲೇ ಇದರಲ್ಲಿ ಕಥಾವ್ಯತ್ಯಾಸ ಭಾಸವಾಗುವುದು ಸಹಜ. ವೇದಾವತಿಯ ಪ್ರಸಂಗ, ರಾವಣನು ಶಿವನ ಆತ್ಮಲಿಂಗವನ್ನು ಪಡೆಯು ವುದು, ಶೂರ್ಪನಖಿಯ ಪ್ರಕರಣ, ಸೇತುಬಂಧದ ಸಂದರ್ಭದಲ್ಲಿ ಶ್ರೀರಾಮನಿಗೆ ರಾವಣನ ಪೌರೋಹಿತ್ಯ, ಸೀತಾಪಹರಣದಲ್ಲಿ ರಾವಣನ ನ್ಯಾಯ ಸಮರ್ಥನೆ— ಇತ್ಯಾದಿ ಸಂದರ್ಭಗಳು ಓದುಗರಿಗೆ ಹಾಗೂ ಯಕ್ಷಗಾನ ಪ್ರದರ್ಶನದಲ್ಲಿ ಶ್ರೋತೃ ಪ್ರೇಕ್ಷಕರಿಗೆ ಕುತೂಹಲಕರವೂ ಮನೋಜ್ಞವೂ ಆಗುವಂತಿವೆ. ರಾತ್ರಿ ಇಡೀ ಅಂದರೆ ಸುಮಾರು ಎಂಟು ಗಂಟೆಯ ಅವಧಿಯ ಬಯಲಾಟಗಳಲ್ಲಿ ಪ್ರಯೋಗಗೊಂಡು ಈ ಕಥಾವಸ್ತು ಚೆನ್ನಾಗಿ ರಯ್ಯಿಸಿರುವುದು ವಿದಿತ.

ದ್ರಾವಿಡ ಭಾಷೆಗಳಲ್ಲಿ ಒಂದಾಗಿರುವ ತುಳು ಒಂದು ಸತ್ತ್ವಪೂರ್ಣವಾದ ಜಾನಪದ ಭಾಷೆ. ಇದು ಯಾವ ಛಂದಸ್ಸಿಗೂ ಒಗ್ಗಿಬರುವ ಗುಣವುಳ್ಳದು. ಯಕ್ಷಗಾನದಂತಹ ಹಾಡುಗಬ್ಬಕ್ಕಂತೂ ತುಂಬ ಸೊಗಸಾದುದು. ಒಂದು ಶಿಷ್ಟ ಭಾಷೆಯ ಅಥವಾ ಗ್ರಾಂಥಿಕ ಭಾಷೆಯ ನಿರ್ದಿಷ್ಟ ಸ್ವರೂಪದಲ್ಲಿ ಇದು ಇಲ್ಲದಿರು ವುದು ಒಂದು ದೃಷ್ಟಿಯಿಂದ ನ್ಯೂನತೆಯಾದರೆ, ಇನ್ನೊಂದು ಬಗೆಯಿಂದ ಗುಣ ವೆನಿಸುತ್ತದೆ. ಈ ಭಾಷೆಯಲ್ಲಿ ಪ್ರಾಚೀನ ಕೃತಿಗಳಾದ ಭಾಗವತ, ಕಾವೇರೀ ಪುರಾಣಗಳು ಇತ್ತೀಚೆಗೆ ಸಂಪಾದಿತವಾಗಿ ಪ್ರಕಟವಾಗಿವೆ. ಈ ಭಾಷೆಯಲ್ಲಿ ಯಕ್ಷ- ಗಾನದ ಆದ್ಯ ಕೃತಿ ಸಂಕಯ್ಯ ಭಾಗವತರು ರಚಿಸಿರುವ "ಪಂಚವಟಿ ವಾಲಿಸುಗ್ರೀವೆರ ಕಾಳಗೊ" (1887). 1929ರಲ್ಲಿ ಮೂರನೆಯ ಮುದ್ರಣವಾಗಿ ಹೊರಬಂದಿದ್ದ ಈ ಕೃತಿ 1968ರಲ್ಲಿ ಪುನಃ ಸಂಪಾದಿತವಾಗಿ ಹೊರಬಂದಿದೆ. ಇದು ಪಾರ್ತಿ ಸುಬ್ಬನ ಕನ್ನಡ ಕೃತಿಯ ತುಳು ಅನುವಾದ. ಈಚೆಗೆ ಹಲವು ಮಂದಿ ತುಳು ಕವಿಗಳು ಹಲವು ಇಂಥವೇ ಅನುವಾದ ಕೃತಿಗಳನ್ನು ಯಕ್ಷಗಾನದಲ್ಲಿ ರಚಿಸಿದ್ದಾರೆ. ಸ್ವತಂತ್ರ ರಚನೆಗಳೂ ಕೆಲವು ಆಗಿವೆ. ಅಂಥವುಗಳಲ್ಲಿ ಪ್ರಸ್ತುತ 'ರಾವಣ ಚರಿತೊ' ಒಂದಾಗಿದೆ.

---

* ರಾವಣ ಚರಿತೊ : (ಬೆಲೆ : ರೂ. 5 – 00)—ಕವಿ : ವಿದ್ವಾನ್ ತಾಳ್ತಜೆ ಕೃಷ್ಣ ಭಟ್ಟ. ಪ್ರ : ಪನೀಧರ ಯಕ್ಷಗಾನ ಸಮಿತಿ. ಸುದಾಮ ಸದನ, ನಂ. 1012, ಬ್ಲಾಕ್ ನಂ. ಎ–3, ರಾಜೇಂದ್ರ ಪ್ರಸಾದ ರೋಡ್, ಮುಳುಂದ (ಪಶ್ಚಿಮ), ಮುಂಬಯಿ–400080.

ಇದನ್ನು ರಚಿಸಿರುವ ಕವಿ ಯಕ್ಷಗಾನದಲ್ಲಿ ನುರಿತ ಅರ್ಥಧಾರಿಗಳು ; ಉತ್ತಮ ವಾಗ್ಮಿ, ಸಾಹಿತ್ಯಕಾರರು. 'ಚಾಣಕ್ಯಸಾಹಸ' ಇವರ ರಘಟಾಬಂಧದ ಕಾವ್ಯ. 'ಯಕ್ಷಗಾನ ಪ್ರಭಾ' ಎಂಬುದು ಸಂಶೋಧನಾತ್ಮಕ ಗ್ರಂಥ. ಪ್ರಕಟಿತ ಲೇಖನಗಳು ಅಸಂಖ್ಯ ; 'ಭೀಷ್ಮಚರಿತೆ' ಇವರ ಕನ್ನಡ ಯಕ್ಷಗಾನ ಕೃತಿ. ಛಂದೋಬದ್ಧ ರಚನೆ ಇವರಿಗೆ ಲೀಲಾಜಾಲ! ಇಂತಹ ಅನುಭವಿ ಹಾಗೂ ಸಮರ್ಥ ಸಾಹಿತಿಯ ರಚನೆಯಾಗಿರುವ 'ರಾವಣ ಚರಿತೊ' ತುಳು ಜಾನಪದ ಸತ್ತ್ವದಿಂದ ಒಪ್ಪುತ್ತಿದೆ. ತುಳು-ಗಾದೆಗಳು, ನುಡಿಗಟ್ಟುಗಳು, ನುರಿಮಾತುಗಳು, ಪಾತ್ರೋಚಿತ ರಸಯುಕ್ತ ಸಂವಾದಗಳು ಈ ಕೃತಿಯುದ್ದಕ್ಕೂ ಹಾಸುಹೊಕ್ಕಾಗಿವೆ. ರಂಗಪ್ರಯೋಗದಲ್ಲಿ ಯಶಸ್ವಿಯಾಗಿರುವ ಈ ಪ್ರಸಂಗ ಓದಿ ತಿಳಿಯಲಾಗದವರು ಓದಿಸಿ, ಅರ್ಥ ಹೇಳಿಸಿ ತಿಳಿದುಕೊಳ್ಳಲು ತಕ್ಕುದಾಗಿದೆ.

**ಟಿ. ಕೇಶವ ಭಟ್ಟ**

## ಸಾದರ ಸ್ವೀಕಾರ

೧. ರತ್ನಾಕರ ವಿರಚಿತ ಶತಕತ್ರಯ ; ಕ್ರೌನ್ ಅ.ಪ. ix+136 ; ಬೆಲೆ : ರೂ. 10-00 ; 1988.

೨. ಸುಕುಮಾರ ಚರಿತ್ರಾದಿ ಸಂಗ್ರಹ ; ಕ್ರೌನ್ ಅ.ಪ. 42 ; ಬೆಲೆ : ರೂ. 4-00
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು : ಪಂಡಿತರತ್ನ ಎ. ಶಾಂತಿರಾಜ ಶಾಸ್ತ್ರಿ ಟ್ರಸ್ಟ್, ಶ್ರೀ ಮಂಜುನಾಥೇಶ್ವರ ಪುಸ್ತಕ ಪ್ರಕಾಶನ ಮಾಲೆ, ಉಜಿರೆ-574240 (ದ.ಕ.)

೩. ಉತ್ತರೋತ್ತರ ಕಾಲೀನ ಹರಿದಾಸರು ಮತ್ತು ಭಕ್ತ ಕವಿಗಳು : ಲೇಖಕರು : ಎಂ. ವಿ. ಸೀತಾರಾಮಯ್ಯ ; ಕ್ರಾನ್ ಅ.ಪ. 84 ; ರಾಘವ ಪ್ರಕಾಶನ, 54, 3ನೇ ಅಡ್ಡಬೀದಿ, ಗವಿಪುರಂ ವಿಸ್ತರಣ, ಬೆಂಗಳೂರು-19.

೪. ಶ್ರೀ ಕೃಷ್ಣದರ್ಶನ : ಲೇಖಕರು : ಶ್ರೀ ಸಮೇತನಹಳ್ಳಿ ರಾಮರಾಯ ; ಕ್ರೌನ್ ಅ.ಪ. xviii+627 ; ರಾಸಪ್ರಕಾಶನ, 518, ನಾಲ್ಕನೇ ದೊಡ್ಡಬೀದಿ, ಗೋಕುಲ ಮೂರನೇ ಹಂತ, ಮೈಸೂರು.

೫. Mandalas in Temple Worship (Vol I); Vidyalankara Prof. S. K. Ramachandra Rao, Kalpataru Research Academy Publication, P.B. No. 1857, Bangalore - 18. P. 172+viii.

೬. ಕಾತರ (ಕವನ ಸಂಕಲನ)—ಕವಿ : ನಜೀರ ಚಂದಾವರ : ಸಮೀರ ಪ್ರಕಾಶನ, ಶಿರಸಿ ; ಪುಟ : 8+78 ; ಬೆಲೆ : ರೂ. ೧೫.

೧. **ಜೀವನ ಧರ್ಮಸಾರ**; ಲೇ: ಸ್ವಾಮಿ ನಿರ್ಮಲಾನಂದ; ಅನುವಾದ: ಶಂಸ ಐತಾಳ; ಪ್ರಕಟಣೆ: ವಿಶ್ವಶಾಂತಿ ನಿಕೇತನ, ಬಿ. ಆರ್. ಹಿಲ್ಸ್, ಚಾಮರಾಜ ನಗರ, ಮೈಸೂರು ಜಿಲ್ಲೆ; ಕ್ರೌನ್ ಅಷ್ಟಪತ್ರ. 72; ಬೆಲೆ: 10 ರೂಪಾಯಿ.

೨. **ನೀತಿಸಾರ**; ಅದೇ ಲೇಖಕರು, ಸುಭಾಷಿತ ಸಂಗ್ರಹ ಮತ್ತು ಅನುವಾದ.

ಸ್ವಾಮಿ ನಿರ್ಮಲಾನಂದರು ಬಿಳಿಗಿರಿರಂಗನ ಬೆಟ್ಟವನ್ನು ತಮ್ಮ ಆಧ್ಯಾತ್ಮಿಕ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು, ಸುಮಾರು ಇಪ್ಪತ್ತೈದು ವರ್ಷಗಳಿಂದಲೂ ಜನಸಾಮಾನ್ಯರಿಗೂ ಸಾಧಕರಿಗೂ ಮಾರ್ಗದರ್ಶನಮಾಡುತ್ತ ಒಂದು ಸಂಸ್ಕೃತಿ-ಸಾಧನ ಕೇಂದ್ರವಾಗಿ ಕಾರ್ಯಮುಖರಾಗಿದ್ದಾರೆ. ಪ್ರಪಂಚದ ಅನೇಕ ದೇಶಗಳಲ್ಲಿ ಪ್ರವಾಸಮಾಡಿ ಅನೇಕ ಮತಗಳ, ದರ್ಶನಗಳ, ಪಂಥಗಳ ಸಾಧಕರೊಡನೆ ಇದ್ದು ಸಮಾಲೋಚನೆಯನ್ನು ನಡೆಸಿ, ಸ್ವಂತ ದರ್ಶನವನ್ನು ಕಂಡುಕೊಂಡಿದ್ದಾರೆ. ಆತ್ಮ-ಜ್ಞಾನದ ಹಾದಿಯಲ್ಲಿ ಬಹುದೂರ ಸಾಗಿ ಮಾನವನ ಬಾಳಿಗೆ ಏನು ಉದ್ದೇಶವಿರಬೇಕು, ಯಾವುದು ಅನುಸರಣೆಗೆ ಯೋಗ್ಯ ಯಾವುದರಿಂದ ಮಾನವನು ಶಾಂತಿ ಸಮಾಧಾನಗಳನ್ನು ಕಂಡುಕೊಳ್ಳಬಹುದು ಎಂಬುದನ್ನೆಲ್ಲ ಅತ್ಯಂತ ಖಚಿತವಾದ ರೀತಿಯಲ್ಲಿ ಸರಳವಾಗಿ ಸ್ಪಷ್ಟವಾಗಿ ಸಂಗ್ರಹವಾಗಿ ಹೇಳಬಲ್ಲವರಾಗಿದ್ದಾರೆ. ಆದುದರಿಂದಲೇ ಚಾಮರಾಜನಗರದ ಸುತ್ತಮುತ್ತಲಿನ ಜನರಿಗೆ ಈ ತಪಸ್ವಿಯನ್ನು ಕುರಿತು ಅಂಥ ಗಾಢವಾದ ಭಕ್ತಿ ವಿಶ್ವಾಸಗಳು ಬೆಳೆದಿದೆ.

ಶ್ರೀಯುತರು ಇಂಗ್ಲಿಷಿನಲ್ಲಿ ಅನೇಕ ಗ್ರಂಥಗಳನ್ನು ಬರೆದು ಪ್ರಕಟಿಸಿದ್ದಾರೆ. ಅವು ಜನಪ್ರಿಯತೆಯನ್ನೂ ಗಳಿಸಿವೆ. ಈ ಸಂದರ್ಭದಲ್ಲಿ ಅವರು ಇಂಗ್ಲಿಷಿನಲ್ಲಿ ರಚಿಸಿರುವ 'A Way of Life' ಎಂಬ ಗ್ರಂಥವನ್ನು ಶ್ರೀ ಶಂಸ ಐತಾಳರು ಕನ್ನಡಕ್ಕೆ 'ಜೀವನ ಧರ್ಮ' ಎಂಬ ಹೆಸರಿನಲ್ಲಿ ಅನುವಾದಮಾಡಿದ್ದಾರೆ. ಅನುವಾದವೂ ಸರಳವಾಗಿ ಓದಲು ಆಕರ್ಷಕವಾಗಿದೆ.

ಈ ಗ್ರಂಥದಲ್ಲಿ ಎರಡು ಭಾಗಗಳಿವೆ. (೧) ಝೆನ್: ಒಂದು ಜೀವನ ಮಾರ್ಗ: (೨) ಧರ್ಮ:—ಒಂದು ಜೀವನ ಕಾವ್ಯ, ಎಂದು ಅವುಗಳ ಹೆಸರು. ಈಗ ಪ್ರಪಂಚದಲ್ಲಿ ಝೆನ್ Buddhism ಎಂಬ ಹೆಸರಿನಲ್ಲಿ ಅತ್ಯಂತ ಜನಪ್ರಿಯವಾಗಿರುವ ಒಂದು ತತ್ವ, ಸಾಧನಮಾರ್ಗ. ಝೆನ್ ಎಂಬುದು ಸಂಸ್ಕೃತದ 'ಧ್ಯಾನ' ಶಬ್ದದಿಂದ ವ್ಯುತ್ಪನ್ನವಾಗಿದೆ. "ಪರರ ಮೇಲೆ ಪ್ರೀತಿ ಅನುಕಂಪಗಳನ್ನು ತೋರಿಸುವುದು ಸಾಧ್ಯವಾಗುತ್ತದೆ. ಅಷ್ಟೇ ಅಲ್ಲ, ಹೂಬಿಸಿದ ದಳ ಕೆಳಗುರುಳುವಂತೆ ನಿಮ್ಮ ಮರಣವನ್ನೂ ನೀವೇ ಸ್ವತಃ ನೋಡಬಲ್ಲಿರಿ. ನಿಮ್ಮೊಳಗೆ ಝೆನ್ ಇರುವಾಗ, ನೀವು ಪ್ರಸನ್ನಚಿತ್ತರಾಗಿರುತ್ತೀರಿ: ಪರಮಾನುದದಿಂದ ಕೂಡಿದ ಪ್ರಶಾಂತತೆಯಿಂದ ಜೀವನದ ಸಂಪೂರ್ಣ ಸಂತೋಷವನ್ನು ಅನುಭವಿಸುತ್ತೀರಿ" ಎಂದು ಝೆನ್ ಪ್ರತಿಪಾದಕರು

ಹೇಳುತ್ತಾರೆ. ಧ್ಯಾನವೇ ಕೇಂದ್ರವಾದ ಮೇಲೆ ಇಂಥ ಪ್ರಭಾವ ಸಾಧ್ಯವೆಂದು ಬೇರೆ ಹೇಳಬೇಕಾಗಿಲ್ಲ.

ಈ ಝೆನ್ ಮತಕ್ಕೆ ಆಧಾರವಾಗಿ ಪೂಜಿಸಬೇಕಾದ ದೇವರಿಲ್ಲ ; ಮತಸಂಸ್ಕಾರಗಳಿಲ್ಲ ; ಸ್ವರ್ಗನರಕಗಳಿಲ್ಲ ; ದೇವರಿಗೂ ಮಾನವರಿಗೂ ನಡುವೆ ದಳ್ಳಾಳಿಗಳಿಲ್ಲ. ಅದೊಂದು ಒದುಕಿರುವ ಕಾವ್ಯ. ಮನಸ್ಸಿನಲ್ಲಿರುವ ದ್ವೈತಭಾವನೆಯನ್ನು ಗೆಲ್ಲುವುದೇ ಮುಖ್ಯ ಕಾರ್ಯ. ಝೆನ್ ನಿಜವಾಗಿ ಬಾಳನ್ನು ಕಾಣುವ ಒಂದು ಮಾರ್ಗ, ಅಷ್ಟೆ ! ಬುದ್ಧದೇವನ ಮುಗುಳ್ನಗೆ ಮತ್ತು ಪ್ರಶಾಂತಮೌನ. ಆ ಮುಗುಳ್ನಗೆಯಿಂದ ನಾವು ಸಂತೋಷವೇ ಜೀವನದ ಧ್ಯೇಯವೆಂಬುದನ್ನು ಕಲಿಯಬಹುದು.

ಝೆನ್ ಬಗೆಗೆ ಅನೇಕ ಸ್ವಾರಸ್ಯವಾದ ಕಥೆಗಳಿವೆ. ಈ ಎಲ್ಲ ಕಥೆಗಳೂ ಝೆನ್ ಮೂಲತತ್ವಗಳನ್ನು ಎತ್ತಿಸಾರುತ್ತವೆ. ಈ ಗ್ರಂಥದಲ್ಲಿ ಅಂಥ ಕೆಲವು ಕಥೆಗಳನ್ನು ಸಂಗ್ರಹಿಸಿ ನಿರೂಪಿಸಲಾಗಿದೆ.

ಝೆನ್ ಗುರುಗಳು ಆಗಿಂದಾಗ ಹೇಳಿದ ಸೂತ್ರರೂಪದ ವಾಕ್ಯಗಳನ್ನು ಸಮಯಾನುಸಾರ ಲೇಖಕರು ಈ ಲೇಖನಗಳಲ್ಲಿ ಕೋದು ಸತ್ಕಾರ್ಯವನ್ನು ಮಾಡಿದ್ದಾರೆ. ಕೆಲವು ವಾಕ್ಯಗಳನ್ನು ಉದಾಹರಿಸುತ್ತೇನೆ.

'ಪರಮ ಜ್ಞಾನವೇ ಪರಮ ಅನುಕಂಪ'

'ನಿಮ್ಮ ದೀಪವನ್ನು ನೀವೇ ಹೊತ್ತಿಸಿಕೊಳ್ಳಿ'

'ಸತ್ಯ ಎಲ್ಲೆಡೆಯೂ ಇದೆ. ಅದು ಕುರುಡನಿಗೆ ಕಾಣಿಸುವುದಿಲ್ಲ.'

'ನಿಗರ್ವವೇ ಎಲ್ಲ ಗುಣಗಳ ಮೂಲ ತಳಹದಿ'

ಎರಡನೆಯ ಭಾಗದಲ್ಲಿ ಧರ್ಮ – ಮಾನವನು ಅನುಸರಿಸುವ ಧರ್ಮ ಜೀವಂತ ಕಾವ್ಯ ಸ್ವರೂಪವಾಗಿರುತ್ತದೆಂಬ ಅರ್ಥವನ್ನು ಪ್ರಪಂಚದ ಅನೇಕ ಸಾಧಕರ, ಚಿಂತನಪರರ, ಕವಿಗಳ, ದಾರ್ಶನಿಕರ ವಾಕ್ಯಗಳನ್ನು ಉದ್ಧರಿಸಿ ತೋರಿಸಲಾಗಿದೆ. ಈ ಭಾಗದಲ್ಲಿ ಶ್ರೀ ಸ್ವಾಮಿ ನಿರ್ಮಲಾನಂದರ ಬಹುಶ್ರುತತ್ವವು ಕಂಡುಬರುತ್ತದೆ. ಓದಲು ಸ್ವಾರಸ್ಯವಾಗಿರುವ ಭಾಗವು, ಅಲ್ಲಲ್ಲಿ ನಿಂತು ಆಯಾ ಕವಿಗಳ ದಾರ್ಶನಿಕರ ಮಾತುಗಳನ್ನು ಕುರಿತು ವ್ಯಾಪಕವಾಗಿ ಆಲೋಚನೆ ಮಾಡುವ ಅವಕಾಶವನ್ನು ನೀಡುತ್ತದೆ.

ಈ ಗ್ರಂಥ ಚಿಕ್ಕದಾದರೂ ತುಂಬ ಪ್ರಭಾವಶಾಲಿಯಾದ ಗುಣಗಳನ್ನು ಹೊಂದಿದೆ. ನಮ್ಮ ಓದುಗರು ಈ ಗ್ರಂಥವನ್ನು ಸಂಗ್ರಹಿಸಬೇಕೆಂದು ನಾನು ಸೂಚಿಸಬಯಸುತ್ತೇನೆ.

ಎರಡನೆಯ ಗ್ರಂಥವು ಅನೇಕ ಸುಭಾಷಿತಗಳ ಸಂಕಲನ. ಇಲ್ಲಿರುವ 100 ಸುಭಾಷಿತಗಳಲ್ಲಿ ಎಲ್ಲವೂ ವಿದ್ವದ್ರಸಿಕರ ಮಾತಿನಲ್ಲಿ ಆಗಾಗ ಕಂಡುಬರುವ ವಾಕ್ಯಗಳು. ಆದರೂ ಮತ್ತೆ ಮತ್ತೆ ಹೇಳಲು ಅರ್ಹವಾದವುಗಳು. ಇವುಗಳ ಕನ್ನಡ ಅನುವಾದವು ಎಲ್ಲ ಕಡೆ ಸರಳವೂ ಉಚಿತವೂ ಆಗಿದೆ.

ಇಂಥ ಗ್ರಂಥಗಳನ್ನು ಕನ್ನಡಕ್ಕೆ ನೀಡಿರುವ ಲೇಖಕರನ್ನು ನಾನು ಅಭಿನಂದಿಸುತ್ತೇನೆ.

**ಜಿ. ವೆಂಕಟಸುಬ್ಬಯ್ಯ**

## ಒಂದು ತಿದ್ದುಪಡಿ

ಕರ್ನಾಟಕ ಲೋಚನ, ಜೂನ್, 1988 – ಸಂಚಿಕೆಯಲ್ಲಿ, "**ಛಂದೋಗತಿಯ ವಿಮರ್ಶೆ–ಪ್ರತಿಕ್ರಿಯೆ**" ಎಂಬ ಲೇಖನದಲ್ಲಿ, (ಪುಟ 109) ಪಂಕ್ತಿ 10ರಲ್ಲಿ ಬರುವ '**ಮೂಲಾರ್ಥವು**' ಎಂಬುದನ್ನು '**ಮುಖ್ಯಾರ್ಥವು**' ಎಂದು ತಿದ್ದಿ ಓದಿಕೊಳ್ಳಬೇಕಾಗಿ ಮಾನ್ಯ ಲೇಖಕರು ವಾಚಕರಲ್ಲಿ ವಿಜ್ಞಾಪಿಸಿರುತ್ತಾರೆ.

**–ಸಂ.**

# ವಸ್ತುಸಂಗ್ರಹ

**ಆದಿಶಂಕರರ ಕಾಲನಿರ್ಣಯ: ಕೊನೆಗಾಣದ ಅನ್ವೇಷಣ.**

ಜೂನ್ 1988ರ ಲೋಚನದಲ್ಲಿ ಕಾಣಿಸಿದಂತೆ, ಆದಿಶಂಕರರ ಕಾಲದ ಬಗೆಗೆ ಶ್ರೀ ಕೆ. ಆರ್. ವಿಶ್ವನಾಥನ್ ಮತ್ತು ಕೆ. ವೇದಮೂರ್ತಿ ಅವರು ಉಲ್ಲೇಖಿಸಿರುವ ಅಭಿಪ್ರಾಯಗಳ ಜೊತೆಗೆ ಇನ್ನು ಕೆಲವು ಅಭಿಪ್ರಾಯಗಳನ್ನು ಸೇರಿಸಿ, ಕೆಲವನ್ನು ವಿಮರ್ಶಿಸಿ, ಶ್ರೀ ಪಿ. ಎಸ್. ಸುಬ್ರಮಣಿಯಮ್ ಎಂಬವರು ಶಂಕರರ ಜನ್ಮವರ್ಷ ಕ್ರಿ.ಶ. 788 ಎಂಬುದು ಸಾಕಷ್ಟು ಪ್ರಮಾಣವನ್ನು ಹೊಂದಿದೆ ಎಂದು ಅದೇ ಪತ್ರಿಕೆಯಲ್ಲಿ ಬರೆದಿದ್ದಾರೆ.

ಶಂಕರರ ಕಾಲ ಕ್ರಿ.ಪೂ. 509ರಿಂದ ಕ್ರಿ.ಶ. 788ರ ನಡುವೆ ತೂಗಾಡುತ್ತಿದೆ. ಅವರ ಲೇಖನದ ಸಾರಾಂಶವನ್ನು ಕೆಳಗೆ ಕೊಡಬಯಸುತ್ತೇವೆ: ಮ್ಯಾಕ್ಸ್ ಮುಲರ್, ರಾಧಾಕೃಷ್ಣನ್, ಜವಹರಲಾಲ್ ನೆಹರು, ದಾಸ್‌ಗುಪ್ತ ಅವರ ಕ್ರಿ.ಶ. 788-820 ನ್ನು ಒಪ್ಪಿಕೊಂಡಿರುತ್ತಾರೆ. ಕಾಲನಿರ್ಣಯದಲ್ಲಿ ಸಾಹಿತ್ಯದೃಷ್ಟಿಕೋನ ಮತ್ತು ಆಂತರಿಕ ಪ್ರಮಾಣಗಳು ಹಲವು ವಿದ್ವಾಂಸರಿಗೆ ಆಧಾರಗಳಾಗಿವೆ. ಶಂಕರರು ತಮ್ಮ ಕೃತಿಗಳಲ್ಲಿ ಬೌದ್ಧ ತಾರ್ಕಿಕನಾದ ಧರ್ಮಕೀರ್ತಿಯ ಹೆಸರನ್ನು ಉಲ್ಲೇಖಿಸುತ್ತಾರೆ. ಆಂತರಿಕ ಪ್ರಮಾಣಗಳನ್ನು ಕೂಲಂಕಷವಾಗಿ ಪರಿಶೀಲಿಸಿರುವ ವಿದ್ವಾಂಸರು ಅಭಿಪ್ರಾಯಪಡುವ ಮೇರೆಗೆ ಶಂಕರರು ಭರ್ತೃಹರಿ, ದಿಙ್ನಾಗ, ಧರ್ಮಕೀರ್ತಿ, ಗೌಡಪಾದ, ಕುಮಾರಿಲ ಭಟ್ಟ, ಇವರಿಗಿಂತ ಈಚಿನವರು. ಶಂಕರರು ತಮ್ಮ ಕೃತಿಗಳನ್ನು 8ನೇ ಶತಕದ ಕಡೆಕಡೆಯಲ್ಲಿ ರಚಿಸಿರಬೇಕು.

ಶಂಕರರು ಕ್ರಿಸ್ತಪೂರ್ವದಲ್ಲಿ ಇದ್ದರು ಎನ್ನುವವರ ಪ್ರಮಾಣ, ಕಾಶ್ಮೀರದ ಶ್ರೀನಗರದಲ್ಲಿರುವ 'ಶಂಕರಾಚಾರ್ಯ ಬೆಟ್ಟ' ಎಂಬ ಹೆಸರಿನ ಒಂದು ಗುಡ್ಡ. ಇದರ ಪ್ರಸ್ತಾವ ಕಲ್ಹಣನ 'ರಾಜತರಂಗಿಣಿ'ಯಲ್ಲಿ ಇದೆ ಎಂದು ಅವರ ವಾದ. ಆದರೆ, ಈ ಸಂಬಂಧದ ಶ್ಲೋಕಗಳು 'ಗೋಪಾದಿತ್ಯ ಬೆಟ್ಟ' ಎಂಬ ಹೆಸರನ್ನು ಉಲ್ಲೇಖಿಸುತ್ತವೆ. ದೊರೆ ಗೋಪಾದಿತ್ಯ ಬ್ರಾಹ್ಮಣರಿಗೆ ಗೋಪ ಅಗ್ರಹಾರವನ್ನು ದಾನಮಾಡಿದ್ದನು. ಇನ್ನೊಂದು ಪದ್ಯದಲ್ಲಿ ಅಶೋಕ ಚಕ್ರವರ್ತಿಯ ಮಗ ಜಲೌಕ ಎಂಬವನು (ಕಿ.ಪೂ. 3ನೇ ಶತಕ) ಶ್ರೀನಗರದಲ್ಲಿ ಕಟ್ಟಿಸಿದ ದೇವಾಲಯದ ಪ್ರಸ್ತಾವ ಇದೆ. ಇದೊಂದು ಶಿವಾಲಯ. ಈ ಪದ್ಯದಲ್ಲಿ ಶಂಕರಾಚಾರ್ಯರ ಇಲ್ಲವೆ ಅವರ ಹೆಸರು ಹೊತ್ತ ಬೆಟ್ಟದ ಪ್ರಸ್ತಾವ ಇಲ್ಲವೇ ಇಲ್ಲ.

ಇನ್ನೊಂದು ಉಲ್ಲೇಖ 1890ರಲ್ಲಿ ಪ್ರಕಟವಾದ ಕಾಶ್ಮೀರ ಮತ್ತು ಲಡಖ್‌ನ ಗೆಜೆಟಿಯರ್‌ನಲ್ಲಿ ಇದೆ. ಇದರಲ್ಲಿ ತಖ್ತ್-ಇ-ಸುಲೇಮಾನ್ (ಸುಲೇಮಾನ ಗಾದಿ)

ಎಂಬ ಹೆಸರಿನ ಬೆಟ್ಟದ ಪ್ರಸ್ತಾವ ಇದೆ. ಈ ಬೆಟ್ಟಕ್ಕೆ ಶಂಕರ ಬೆಟ್ಟ ಎಂಬ ಹೆಸರೂ ಇದೆ. ಈ ಹೆಸರು ಕಾಶ್ಮೀರವನ್ನು ಕ್ರಿ.ಶ. 945–6 ರಲ್ಲಿ ಆಳುತ್ತಿದ್ದ ಶಂಕರ ಎಂಬ ದೊರೆಯ ಹೆಸರಾಗಿರುವುದು ಸಾಧ್ಯ.

ಶಂಕರರು ಕ್ರಿ.ಪೂ.ಕ್ಕೆ ಸೇರಿದವರು ಎನ್ನುವವರ ಇನ್ನೊಂದು ಪ್ರಮಾಣ: ದ್ವಾರಕಾಮಠದಲ್ಲಿ ಇರುವ 'ವಿಮರ್ಶೆ' ಎಂಬ ಗ್ರಂಥ. ಈ ಗ್ರಂಥದಲ್ಲಿ ಒಂದು ತಾಮ್ರಶಾಸನದ ಆಲೇಖ್ಯ ಅಚ್ಚಾಗಿದೆ. ಇದರಲ್ಲಿ ಸುಧನ್ವ ಎಂಬ ದೊರೆ ಶಂಕರ ಮತ್ತು ಸುರೇಶ್ವರರಿಗೆ ಒಪ್ಪಿಸಿದ ಬಿನ್ನಪ ಇದೆ. ಇದರ ಹೇಳಿಕೆ ಎಷ್ಟು ವಿಶ್ವಸನೀಯ ಎಂಬುದು ಅದರಲ್ಲಿ ಹೇಳಿರುವ ಒಂದು ಸಂಗತಿಯಿಂದ ವಿಶದಪಡುತ್ತದೆ: ಶಂಕರರು ಅರೇಬಿಯಾಕ್ಕೆ ಹಾರಿಹೋಗಿ ನಡುಬಾನಿನಲ್ಲಿ 64 ದಿನ ತೇಲಾಡುತ್ತಿದ್ದರಂತೆ; ಅರಾಬಿಕ್ ಭಾಷೆಯಲ್ಲಿ ಅಲ್ಲಿಂದ ಉಪದೇಶ ಭಾಷಣ ಮಾಡಿದರಂತೆ! ಅದರ ಒಂದು ಭಾಗವೇ ಪವಿತ್ರ ಕೊರಾನ್ ಆಗಿ ರೂಪಗೊಂಡಿತಂತೆ! 'ವಿಮರ್ಶೆ' ಹೊರಬಂದು ಒಂದು ಶತಕವೇ ಸಂದರೂ ಅದರಲ್ಲಿ ಪ್ರಸ್ತಾವಿಸಲಾದ ತಾಮ್ರಶಾಸನ ವಿದ್ವಾಂಸರ ಅಧ್ಯಯನಕ್ಕೆ ಇನ್ನೂ ದೊರಕಿಲ್ಲ.

ಶೃಂಗೇರಿ ಮಠ ಕ್ರಿ.ಪೂ.ದ ವಾದವನ್ನು ಒಪ್ಪಿಕೊಂಡಿದೆ ಎಂದು ಸಾಧಿಸುವ ಪ್ರಯತ್ನವೂ ನಡೆದಿದೆ. 1910 ರಲ್ಲಿ ನಡೆದ ಕುಂಭಾಭಿಷೇಕದ ಸಮಯದಲ್ಲಿ, ಕಾಲಡಿ ಕ್ಷೇತ್ರದಲ್ಲಿ, ಶಂಕರರ ತಾಯಿ ಆರ್ಯಾಂಬೆಯ ಸಮಾಧಿ ಸ್ಥಳದಲ್ಲಿ ಒಂದು ಶಿಲಾಶಾಸನ ಸ್ಥಾಪಿತವಾಗಿದೆ. ಅಜ್ಞಾತವಾಗಿ ಮರೆವಿನ ಮರೆಯಲ್ಲಿ ಹುಗಿದಿದ್ದ ಶಂಕರರ ಜನ್ಮಸ್ಥಳವನ್ನು ಗುರುತಿಸಿದವರು ಶ್ರೀ ಶೃಂಗೇರೀ ಶಾರದಾ ಪೀಠದ 33ನೆಯ ಆಚಾರ್ಯರಾದ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತಿ ಅವರು. "ಪ್ರಾಯಶಃ 2000 ವರ್ಷಗಳ ಹಿಂದೆ ಶ್ರೀ ಶಂಕರರು ಈ ಭೂಮಿಯ ಮೇಲೆ ಅವತರಿಸಿದರು" ಎಂದು ಆ ಶಾಸನ ಹೇಳುತ್ತದೆ. ಶೃಂಗೇರಿ ಜಗದ್ಗುರುಗಳು ಇತಿಹಾಸ ಸಂಶೋಧನೆಯನ್ನು ಎಂದೂ ಅಧಿಕೃತವಾಗಿ ಪುರಸ್ಕರಿಸಿಲ್ಲ; ಐತಿಹಾಸಿಕ ಆಧಾರಗಳನ್ನು ಮುಂದಿಡುವ ಆಸಕ್ತಿಯನ್ನು ಎಂದೂ ತೋರಿಲ್ಲ. ರಾಮಕೃಷ್ಣಾಶ್ರಮದ ಶ್ರೀ ಸ್ವಾಮಿ ತಪಸ್ಯಾನಂದ ಅವರು 'ಮಾಧವೀಯ ಶಂಕರ ವಿಜಯ'ಕ್ಕೆ ಬರೆದಿರುವ ಪೀಠಿಕೆಯಲ್ಲಿ ಶೃಂಗೇರಿ ಮಠವು ಕ್ರಿಸ್ತಪೂರ್ವವಾದವನ್ನು ಎಂದೂ ಒಪ್ಪಿಕೊಂಡಿಲ್ಲ ಎಂದೇ ಹೇಳಿದ್ದಾರೆ. ಕಾಲಡಿ ಶಾಸನದ ಹೇಳಿಕೆಗೆ ಹೆಚ್ಚೆಂದರೆ "ಹಲವು ಶತಮಾನಗಳಿಗೆ ಹಿಂದೆ" ಎಂದು ಅರ್ಥಮಾಡಬಹುದು ಅಷ್ಟೆ. ಅದಕ್ಕೆ ಯಾವ ಐತಿಹಾಸಿಕ ನಿಷ್ಕೃಷ್ಟತೆಯೂ ಇರದು.

ಹಲವು 'ಶಂಕರ ವಿಜಯ' ಗ್ರಂಥಗಳಿವೆಯಷ್ಟೆ. ಅವುಗಳಲ್ಲಿ ಕೆಲವು ಶಂಕರರ ಜನ್ಮಕುಂಡಲಿಗಳನ್ನು ಕೊಟ್ಟಿವೆ. ಇವುಗಳ ಆಧಾರದ ಮೇಲೆ ಜ್ಯೋತಿಷ್ಯರು ಶಂಕರರ

ಜನ್ಮದಿನವನ್ನು ಕ್ರಿ.ಶ. 805 ಎಂದು ನಿರ್ಧರಿಸಿದ್ದಾರೆ. ಡಾ॥ ಎಂ. ಉಮೇಶ್ ಎಂಬವರು 'ಶಂಕರರ ಕಾಲ' ಎಂಬ ತಮ್ಮ ಪುಸ್ತಕದಲ್ಲಿ ಶಂಕರರು ಕ್ರಿ.ಶ. 6 ಮತ್ತು 8ನೆಯ ಶತಮಾನದ ನಡುವೆ ಜೀವಿಸಿದ್ದರು ಎಂದು ಅಭಿಪ್ರಾಯಪಟ್ಟಿದ್ದಾರೆ. ಸ್ವಾಮಿ ತಪಸ್ಯಾನಂದರೂ ಇದೇ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಒಟ್ಟಿನಲ್ಲಿ ಹೇಳುವುದಾದರೆ, ಶಂಕರರ ಕಾಲನಿರ್ಣಯ ಸಂಬಂಧವಾದ ಸಂಕ್ಷಿಪ್ತವಾದ ಚರ್ಚೆಗಳು ಈ ಪಾಂಡಿತ್ಯ ಪೂರ್ಣ ಅಜ್ಞಾನಪ್ರಕಾಶನದಲ್ಲಿಯೇ ಮುಗಿಯುತಕ್ಕದ್ದು!

ಗಮನಾರ್ಹ ಅಂಶವೆಂದರೆ, ಕ್ರಿ.ಶ. 788ನ್ನೇ ಆಧಾರವಾಗಿಟ್ಟುಕೊಂಡು ಶಾಂಕರಪಂಥದ ಅನುಯಾಯಿಗಳು 1988ರ ಶಂಕರಜಯಂತಿಯನ್ನು 1200ನೆಯ ಜಯಂತಿಯಾಗಿ ದೇಶದ ಎಲ್ಲೆಡೆ ಅಭೂತಪೂರ್ವವಾಗಿ ನಡಸಿದರು.

## ವಾಗರ್ಥ : ಕಾವ್ಯೋತ್ಸವ

ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ
ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ—ಕಾಳಿದಾಸ
ವಿನಯೇನ ವಿನಾ ಕಾ ಶ್ರೀಃ ಕಾ ನಿಶಾ ಶಶಿನಾ ವಿನಾ
ರಹಿತಾ ಸತ್ಕವಿತ್ವೇನ ಕೀದೃಶೀ ವಾಗ್ವಿದಗ್ಧತಾ —ಭಾಮಹ

ಜನವರಿ 11 ರಿಂದ 17 ರ ವರೆಗೆ ಮಧ್ಯಪ್ರದೇಶದ ರಾಜಧಾನಿ ಭೂಪಾಲಿನ ಭಾರತಭವನದಲ್ಲಿ ನಡೆದ ಕಾವ್ಯೋತ್ಸವ ಒಂದು ಅಭೂತಪೂರ್ವ ವಿಶ್ವಕವಿಮೇಳ. ರಾಷ್ಟ್ರಮಟ್ಟದಲ್ಲಿ ಭಾರತೀಯ ಭಾಷೆಗಳ ಕವಿಸಮ್ಮೇಳನಗಳು ನಡೆಯುವುದು ಅಪರೂಪವೇನಲ್ಲ. ಕರ್ನಾಟಕದಲ್ಲಿ ದಸರಾ ಕವಿಸಮ್ಮೇಳನ ನಡೆಯುತ್ತಿದೆ. ಜಾಗತಿಕಮಟ್ಟದಲ್ಲಿ ನಡೆಯುತ್ತಿರುವುದು ಇದೇ ಎರಡನೆಯದು; ಮೊದಲನೆಯ ಮೇಳವನ್ನೂ ಭಾರತಭವನವೇ ನಡಸಿತು (1985).

ಮಧ್ಯಪ್ರದೇಶದ ಸರ್ಕಾರ ಈಚಿನ ದಿನಗಳಲ್ಲಿ ಅಖಿಲಭಾರತ ಮಟ್ಟದಲ್ಲಿ ಕಾಳಿದಾಸ ಸಂಮಾನ, ಕಬೀರ್ ಸಂಮಾನ ಎಂಬ ಪ್ರಶಸ್ತಿಗಳನ್ನು ನೀಡುತ್ತಿರುವುದು. ಕಾವ್ಯಕ್ಕೆ ಮೀಸಲಾದ ಕಬೀರ್ ಸಂಮಾನ ಮೊದಲ ಸಲ ಕರ್ನಾಟಕದ ಅಗ್ರಗಣ್ಯ ಕವಿ ಗೋಪಾಲಕೃಷ್ಣ ಅಡಿಗರಿಗೆ ಲಭಿಸಿತು (1986). ಎರಡನೆಯ ಸಲ ಈ ಸಂಮಾನ ಬಂಗಾಳಿ ಕವಿ ಸುಭಾಷ್ ಮುಖೋಪಾಧ್ಯಾಯ ಎಂಬವರಿಗೆ ದೊರಕಿತು (1987). ಮೂರನೆಯ ಸಲ (1988 ರ ಪ್ರಶಸ್ತಿ). ಪಂಡಿತ ಜವಹರಲಾಲ್ ನೆಹರು ಅವರ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ನಡೆದ ಕಾವ್ಯೋತ್ಸವದಲ್ಲಿ ಪಂಜಾಬಿ ಕವಿಯಾದ ಹರಭಜನ್‌ಸಿಂಗ್ ಅವರಿಗೆ ನೀಡಲಾಯಿತು.

ಜನವರಿಯಲ್ಲಿ ನಡೆದ ಕಾವ್ಯೋತ್ಸವ, ಜಾಗತಿಕ ಕಾವ್ಯೋತ್ಸವ ಎಂಬ ಹೆಸರಿಗೆ ಅನುಸಾರವಾಗಿ ಜಗತ್ತಿನ ಐದು (ಆರು?) ಭೂಖಂಡಗಳ ಅನೇಕ ದೇಶಗಳ

ಪ್ರಾತಿನಿಧಿಕ ಹೆಸರಾಂತ ಕವಿಗಳನ್ನು ಬರಮಾಡಿಕೊಂಡಿತ್ತು: ಬ್ರಿಟನ್, ಫ್ರಾನ್ಸ್, ಸ್ವೀಡನ್. ಡೆನ್‌ಮಾರ್ಕ್. ಜೆಕೋಸ್ಲೋವಾಕಿಯಾ, ಹಂಗೇರಿ, ಸ್ಪೇಯಿನ್, ಮೆಕ್ಸಿಕೊ, ಕ್ಯೂಬ, ಘಾನ. ಚಿಲಿ, ಚೀಣಾ, ನಿಕರಾಗುವ, ಆರ್ಜೆಂಟೀನ, ಆಸ್ಟ್ರೇಲಿಯ, ನೈಜೀರಿಯಾ, ಇಂಡೋನೀಷಿಯಾ, ದ. ಕೊರಿಯ, ತುರ್ಕಿ. ಮುಂತಾದ ದೇಶಗಳನ್ನು ಪ್ರತಿನಿಧಿಸುವ ಕವಿಗಳು ಮೇಳದಲ್ಲಿ ಭಾಗವಹಿಸಿದ್ದರು. ಭಾರತವನ್ನು ಏಳು ಮಂದಿ ಕವಿಗಳು ಪ್ರತಿನಿಧಿಸಿದ್ದರು. ಕನ್ನಡ ಕಾವ್ಯ ಪರವಾಗಿ ಯಾವ ಪ್ರತಿನಿಧಿಯೂ ಇರದಿದ್ದರೂ, ಖ್ಯಾತಕವಿ ಡಾ॥ ರಾಮಚಂದ್ರ ಶರ್ಮರು ವೀಕ್ಷಕರಾಗಿ ಆಹ್ವಾನಿತರಾಗಿದ್ದರು. ಕವಿಮೇಳದಲ್ಲಿ ಭಾಗವಹಿಸಿದ ಎಲ್ಲ ಕವಿಗಳೂ ತಮ್ಮ ಕವಿತೆಗಳನ್ನು ಸ್ವಭಾಷೆಯಲ್ಲಿಯೇ ವಾಚನಮಾಡಿದರು. ಆ ಭಾಷೆ ಬಾರದ ಶ್ರೋತೃಗಳಿಗಾಗಿ ಅವುಗಳ ಆಂಗ್ಲ ಹಾಗೂ ಹಿಂದಿ ಅನುವಾದಗಳನ್ನು ವಾಚನಮಾಡುವ ವ್ಯವಸ್ಥೆ ಮಾಡಲಾಗಿತ್ತು.

ಸಮ್ಮೇಳನದಲ್ಲಿ ಸರ್ವರ ಗಮನವನ್ನು ಸೆಳೆದ ವ್ಯಕ್ತಿ ಆಂಗ್ಲಕವಿ **ಸರ್ ಸ್ಟೀಫನ್ ಸ್ಪೆಂಡರ್.** ಕಾವ್ಯೋತ್ಸವದ ಒಂದು ಗಮನಾರ್ಹ ಹಾಗೂ ಸ್ವಾರಸ್ಯವಾಗಿದ್ದ ಕಾರ್ಯಕ್ರಮ ಕೆಲವು ಪ್ರಮುಖ ಕವಿಗಳೊಡನೆ ನಡಸಿದ ಸಂದರ್ಶನ (ಅಥವಾ ಪ್ರಶ್ನೋತ್ತರ) ಕಾರ್ಯಕ್ರಮ. ಕೆಲವು ಪ್ರಶ್ನೆಗಳಿಗೆ ಸ್ಟೀಫನ್ ಸ್ಪೆಂಡರ್ ನೀಡಿದ ಉತ್ತರಗಳು:

**ಪ್ರಶ್ನೆ:** 1978 ರಲ್ಲಿ ನೀವು ಒಂದು ನಾಟಕ, ಒಂದು ಕಾದಂಬರಿ, ಮುಂತಾದವನ್ನು ಬರೆಯುವುದಾಗಿ ಹೇಳಿದ್ದಿರಿ. ನಿಮ್ಮ ಉದ್ದೇಶ ನೆರವೇರಿದೆಯೆ ?

**ಉತ್ತರ:** ಸಾಮಾನ್ಯವಾಗಿ ಸಂದರ್ಶನಗಳಲ್ಲಿ ಇಂಥ ಸಂಕಲ್ಪಗಳನ್ನು ಪ್ರಕಟಿಸಲಾಗುವುದು.

**ಪ್ರಶ್ನೆ:** ಕಾವ್ಯೋತ್ಸವದಂತಹ ಉತ್ಸವಗಳಿಗಾಗಿ ವೆಚ್ಚಮಾಡುವ ಹಣವನ್ನು ಬಡವರಿಗೆ ವಿನಿಯೋಗಿಸುವುದು ಒಳ್ಳೆಯದಲ್ಲವೆ ?

**ಉತ್ತರ:** ಬಡವರಿಗಾಗಿ ಮಾತ್ರ ಹಣ ಖರ್ಚುಮಾಡಿದರೆ, ನಾಗರಿಕತೆ ಎನ್ನುವುದೇ ಇರುವುದಿಲ್ಲ.

ಭಾರತೀಯರು ಇಂಗ್ಲಿಷಿನಲ್ಲಿ ಕೃತಿರಚನೆ ಮಾಡುವ ವಿಷಯವಾಗಿ ಕೇಳಿದ ಪ್ರಶ್ನೆಗೆ ಅವರ ಉತ್ತರ: "ನೀವು ಭಾರತೀಯರು ಆಂಗ್ಲಭಾಷಾ ರಮಣಿಯೊಂದಿಗೆ ಪ್ರಣಯವ್ಯವಹಾರ ನಡಸುತ್ತಿದ್ದೀರಿ. ಇದೊಂದು ದುರಂತ ಪ್ರಣಯ ವ್ಯವಹಾರ. ಭಾರತೀಯ ಆಂಗ್ಲಬರಹಗಾರರು ಬರೆಯುವ ಇಂಗ್ಲಿಷು ಇಂಗ್ಲೆಂಡಿಗೆ ಪ್ರಯಾಣ ಬೆಳಸುವುದು ಕಷ್ಟ. ಇಂಗ್ಲಿಷಿನಲ್ಲಿ ಬರೆಯುವ ಭಾರತೀಯ ಬರಹಗಾರ ಇಂಗ್ಲಿಷ್ ಭಾಷಾ ಪ್ರಪಂಚದಲ್ಲಿ ಉಳಿಯುವುದು ಬಹಳ ಕಷ್ಟ."

**ಪ್ರಶ್ನೆ:** ಇಂಥ ಕಾವ್ಯೋತ್ಸವಗಳಿಂದ ಏನಾದರೂ ಪ್ರಯೋಜನ ಉಂಟೆ ?

**ಉತ್ತರ:** ಖಂಡಿತ ಉಂಟು. ಒಂದು ಒಳ್ಳೆಯ ಪ್ರಯೋಜನ—ಕವಿಗಳು ಒಂದು ಕಡೆ ಕಲೆತು ಪರಸ್ಪರ ಪರಿಚಯ, ವಿಚಾರ ವಿನಿಮಯ ಮಾಡಿಕೊಳ್ಳುವುದು.

ಸ್ಪೆಂಡರ್ ಸಂದರ್ಶನ ಕಾಲದಲ್ಲಿ ಟಿ. ಎಸ್. ಎಲಿಯಟ್ ಬಗೆಗೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು ; ತಮ್ಮ ಮೇಲೆ ಆತ ಬೀರಿದ್ದ ಪ್ರಭಾವವನ್ನು ನೆನೆದರು : ಎಲಿಯಟ್ ಅವರ ಜನ್ಮಶತಾಬ್ದಿ ಕಾಲದಲ್ಲಿ ಅವರ ಮುಂಚಿನ ಪತ್ರಗಳನ್ನು ಪ್ರಕಟಿಸಿದ್ದು ಕಾಕತಾಳೀಯ ಆದರೂ ದುರದೃಷ್ಟಕರ, ಅವು ಅವರ ವ್ಯಕ್ತಿತ್ವದ ಬಗೆಗಾಗಲಿ ಅವರ ಕಾವ್ಯದ ಬಗೆಗಾಗಲಿ ಪ್ರಸ್ತುತ ಎನಿಸುವುದಿಲ್ಲ, ಸ್ವಾರಸ್ಯಕರ ಸಂಗತಿಗಳನ್ನೇನೂ ತಿಳಿಸುವುದಿಲ್ಲ ಎಂದರು. ಆದರೆ, ಎಲಿಯಟ್ ಇಂದಿಗೂ ಪ್ರಸ್ತುತವಾಗಿಯೇ ಉಳಿದಿದ್ದಾರೆ. ಇಂಗ್ಲಿಷ್ ಕಾವ್ಯಪ್ರಪಂಚದಲ್ಲಿ ಅವರ ಸ್ಥಾನಮಾನ ಇನ್ನೂ ಕುಗ್ಗದೆ ಉಳಿದುಕೊಂಡು ಬಂದಿದೆ. ಅವರ Wasteland ಅದು ಪ್ರಕಟವಾದಾಗ ಎಷ್ಟು ಭಾವಪ್ರಚೋದಕವಾಗಿತ್ತೋ ಉದ್ಬೋಧಕವಾಗಿತ್ತೋ ಇಂದೂ ಹಾಗೆಯೇ ಉಳಿದುಕೊಂಡು ಬಂದಿದೆ ಎಂದರು. ಇನ್ನೂ ಅನೇಕ ಗಂಭೀರ ವಿಚಾರಗಳ ಬಗೆಗೆ ಪ್ರಸ್ತಾವಿಸಿದರು ಅವರು, ತಮ್ಮ ಸಂದರ್ಶನದಲ್ಲಿ.

ಲ್ಯಾಟಿನ್ ಅಮೆರಿಕಾದ ಪ್ರಮುಖ ಕವಿ, ನೊಬೆಲ್ ಪ್ರಶಸ್ತಿ ವಿಜೇತ, ನಿಕೋನಾರ್ ಪಾರ್ರಾ ಅವರೊಡನೆ ಒಂದು ಸಂಜೆ ಕವಿ ರಾಮಚಂದ್ರ ಶರ್ಮ ಮಾತುಕತೆ ನಡಸಿದರು. ಅವರು ನಡಸಿದ ಸಂದರ್ಶನದಲ್ಲಿ ಮೂಡಿಬಂದ ಪಾರ್ರಾ ಅವರ ಕೆಲವು ಅರ್ಥಪೂರ್ಣ ಮಾತುಗಳು :

○ ಸಲೀಸಾಗಿ, ಈಗ ಮಾಡುತ್ತಿರುವ ಹಾಗೆ, ಮಾತಾಡುತ್ತೀರಲ್ಲ! ಅದು ನಿಜವಾದ ಪದ್ಯ: ಬರೆಯಬೇಕೆಂದು ಕೂತಾಗ, ಬರೆದಾಗ, ಬರುವುದು ಗದ್ಯ.

○ ಕವಿ ಸೃಷ್ಟಿಕರ್ತನಲ್ಲ : ಆಗಲೇ ಸೃಷ್ಟಿಯಾದದ್ದರ ನಿರ್ವಾಹಕ, ಅಷ್ಟೆ.

○ ಸಿದ್ಧಾಂತಗಳ ಗುಲಾಮಗಿರಿಯಿಂದ, ಮತಾಂಧತೆಯಿಂದ, ಮನುಷ್ಯನನ್ನು ಪಾರುಮಾಡುವುದೇ ಕಾವ್ಯದ ಕೆಲಸ.

○ ಪ್ರತಿಯೊಂದಕ್ಕೂ ಇತಿಹಾಸ ಹೆಸರು ಕೊಟ್ಟುಬಿಟ್ಟಿರುವುದು ಒಂದು ದೊಡ್ಡ ದುರಂತ ; ವಸ್ತುಗಳನ್ನು ಅವುಗಳಿಗೆ ಇರುವ ಹೆಸರುಗಳಿಂದ ಬಿಡಿಸುವುದನ್ನು ಕವಿ ಬಿಡಿಸಬೇಕಾಗಿದೆ.

○ ಕಾವ್ಯ ಶ್ರೇಷ್ಠವಾಗುವುದು ರೂಪಕಾಲಂಕಾರದಿಂದಲ್ಲ ; ವಸ್ತುವಿಗೆ ಬದಲಾಗಿ ಅದರ ಲಕ್ಷಣವನ್ನು ವಾಚಿಸುವ ಅಲಂಕಾರದಿಂದ.

(ಆಧಾರ: ಡೆಕನ್ ಹೆರಾಲ್ಡ್, ಹಿಂದೂ, ಲಂಕೇಶ್ ಪತ್ರಿಕೆ)

**ಶತಮಾನೋತ್ಸವ ಶ್ರೇಣಿ**

ನಾಡು ನುಡಿಗಳಿಗೆ ಸೇವೆ ಸಲ್ಲಿಸಿದವರನ್ನು ನೆನೆಯಬೇಕಾದ್ದು ನಾಡಿಗರ ಕರ್ತವ್ಯ: ನಮ್ಮ ಶ್ರೇಯಸ್ಸಿಗಾಗಿ ಕೂಡ. ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಪ್ರಪ್ರಥಮವಾಗಿ ಪಿ. ಜಿ. ಹಳಕಟ್ಟಿಯವರ ಶತಮಾನೋತ್ಸವವನ್ನು ಅತ್ಯಂತ ಅರ್ಥಪೂರ್ಣವಾಗಿ ಆಚರಿಸಿದ ಮೇಲೆ ರೆ॥ ಚೆನ್ನಪ್ಪ ಉತ್ತಂಗಿ, ಗೋವಿಂದ ಪೈ, ಹುಯಿಲಗೋಳ ನಾರಾಯಣ ರಾವ್, ಟಿ. ಪಿ. ಕೈಲಾಸಂ, ಇವರುಗಳ ಸೇವೆಯನ್ನು ಯಥಾಶಕ್ತಿ ಸ್ಮರಿಸಿತು. 1984ರಲ್ಲಿ ಬಿ.ಎಂ.ಶ್ರೀ. ಅವರ ಜನ್ಮಶತಾಬ್ದಿಯನ್ನು ರಾಜ್ಯಸರ್ಕಾರದ ಆರ್ಥಿಕ ಸಹಾಯದಿಂದಾಗಿ ನಾಡಿನಾದ್ಯಂತ ಅತ್ಯಂತ ವ್ಯಾಪಕವಾಗಿ, ಅವಿಸ್ಮರಣೀಯವಾಗಿ, ಆಚರಿಸಿತು. ಇದು ಸಕಾರಣವಾಗಿ ಸಹಜವಾದ ಪವಿತ್ರ ಕರ್ತವ್ಯವಾಗಿತ್ತು. ತರುವಾಯ ಬಿ.ಎಂ.ಶ್ರೀ. ಅವರಿಗೆ 'ಚತುರ್ಭುಜ'ವಾಗಿದ್ದ ಟಿ. ಎಸ್. ವೆಂಕಣ್ಣಯ್ಯನವರ ಶತಾಬ್ದಿ (1985). ನಾ. ಶ್ರೀ. ರಾಜಪುರೋಹಿತ, ಎಂ. ಪಿ. ಪೂಜಾರ, ಹರ್ಡೇಕರ ಮಂಜಪ್ಪ, ಶಾಂತಿರಾಜ ಶಾಸ್ತ್ರೀ, ಇವರುಗಳನ್ನೂ ನೆನೆದೆವು. ಇದೆಲ್ಲದರ ಪರಿಣಾಮವಾಗಿ ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ ವ್ಯಕ್ತಿಪೂಜೆಯ ಸಂಸ್ಥೆ. ಶತಮಾನೋತ್ಸವ ದೀಪಧಾರಿ, ಎಂಬ ಅಪಪ್ರಥೆ ಉಂಟಾಗಿರುವಂತಿದೆ. ನಿಜವಾಗಿರುವ ಪಕ್ಷದಲ್ಲಿ, ಇದನ್ನು ನಿಂದಾಸ್ತುತಿ, ಎಂದೇ ನಾವು ಭಾವಿಸಿದ್ದೇವೆ.

ಅಕ್ಟೋಬರ್ 10. 1988. ಕವಿ-ಶಿಕ್ಷಕ ಸಾಲಿ ರಾಮಚಂದ್ರರಾವ್ ಅವರ ಜನ್ಮದಿನ. ಅವರ ಸಂಸ್ಮರಣಾರ್ಥ ಶ್ರೀ ಗೋವಿಂದ ಮೂರ್ತಿ ದೇಸಾಯಿ ಅವರ ಲೇಖನವನ್ನು ಮುಂದಿನ ಪುಟಗಳಲ್ಲಿ ಪ್ರಕಟಿಸಿದೆ. ಇದೇ ವರ್ಷ 'ಸಂಬೋಧ' ರಾಮರಾವ್ (ಜ. 25-8-1989) ಶತಾಬ್ದಿ ವರ್ಷ ಪ್ರಾರಂಭ: ಅವರ ಪುತ್ರ ಮತ್ತು ಬಂಧುವರ್ಗವೆ ಶತಾಬ್ದ್ಯುತ್ಸವವನ್ನು ಆಚರಿಸಲು ತೀರ್ಮಾನಿಸಿರುವುದು. ಸಂತೋಷದ ವಿಷಯ. ಬರುವ ವರ್ಷ ಕನ್ನಡದ ಇನ್ನಿಬ್ಬರು ಹಿರಿಯ ಕನ್ನಡ ಸೇವಕರ ಶತಾಬ್ದಿ ವರ್ಷ ಪ್ರಾರಂಭವಾಗಲಿದೆ: ಒಬ್ಬರು ಬೆಂಗಳೂರು ಕರ್ನಾಟಕ ಸಂಘ ಹಾಗೂ 'ಪ್ರಬುದ್ಧ ಕರ್ನಾಟಕ'ಗಳನ್ನು ಹುಟ್ಟುಹಾಕಿ ಬೆಳಸಿದ ಎ.ಆರ್.ಕೃ. (1890-1968) ಮತ್ತು ಇನ್ನೊಬ್ಬರು ಎಂ.ಆರ್.ಶ್ರೀ. (1890-1953): ಇವರಿಬ್ಬರೂ ಕನ್ನಡ ಸಾಹಿತ್ಯ ಪರಿಷತ್ತಿನ ಬೆಳವಣಿಗೆಯಲ್ಲಿ ಡಿ. ವಿ. ಜಿ. ಅವರಿಗೆ ಎರಡು ಭುಜಗಳಂತೆ ನೆರವಾಗಿದ್ದುದು ಮಾತ್ರವಲ್ಲದೆ, ಸಮ್ಮೇಳನಾಧ್ಯಕ್ಷರುಗಳೂ ಆಗಿದ್ದರು. ಈ ಇಬ್ಬರು ಮಹನೀಯರ ಶತಮಾನೋತ್ಸವಗಳನ್ನು ಕನ್ನಡ ಸಾಹಿತ್ಯ ಪರಿಷತ್ತು ತನ್ನ ಘನತೆಗೆ ತಕ್ಕಂತೆ ಆಚರಿಸುವುದರಲ್ಲಿ ಸಂದೇಹವಿಲ್ಲ. ಆದರೂ, ನಾಡಿನ ಎಲ್ಲ ಸಂಘ ಸಂಸ್ಥೆಗಳೂ ವಿಶ್ವವಿದ್ಯಾನಿಲಯಗಳೂ ಈ ಮಹನೀಯರುಗಳ ಸೇವೆಯನ್ನು ಯಥೋಚಿತವಾಗಿ ನೆನೆಯತಕ್ಕದ್ದು ಅವಶ್ಯ. ಎ.ಆರ್.ಕೃ. ಅವರ ಪುತ್ರಿ ಶ್ರೀಮತಿ ಕೆ. ಶಾಂತಾ ಅವರು ತಾವು ಸ್ಥಾಪಿಸಿರುವ ಎ.ಆರ್.ಕೃ. ಸಂಸ್ಕೃತಿ

.ಪೀಠದ ಮೂಲಕ ಎ.ಆರ್.ಕೃ. ಅವರ ಶತಮಾನೋತ್ಸವವನ್ನು ಆಚರಿಸಲು ನಿರ್ಧರಿಸಿರುವುದು ಶ್ಲಾಘ್ಯವಾಗಿದೆ. ಈ ಪೀಠಕ್ಕೆ ಸರ್ವರ ಸಹಾಯ ಸಹಕಾರಗಳು ದೊರೆಯಲೆಂದು ಆಶಿಸುತ್ತೇವೆ. ಈ ಎಲ್ಲ ಮಹನೀಯರ ಸಾಹಿತ್ಯಸೇವೆಯನ್ನು ಬಿ.ಎಂ.ಶ್ರೀ. ಪ್ರತಿಷ್ಠಾನ ಕೂಡ ತನ್ನ ಶಕ್ತ್ಯನುಸಾರ ಸ್ಮರಿಸುವ ವ್ಯವಸ್ಥೆಯನ್ನು ಕೈಗೊಳ್ಳಲಿದೆ.

ಈ ಸಂದರ್ಭದಲ್ಲಿ, ಕನ್ನಡ ಭಕ್ತಿ ಸಾಹಿತ್ಯಕ್ಕೆ, ಹರಿದಾಸ ಸಾಹಿತ್ಯಕ್ಕೆ ಸ್ಫೂರ್ತಿಯನ್ನೂ ನೆಲೆಗಟ್ಟನ್ನೂ ತಮ್ಮ ದ್ವೈತದರ್ಶನದ ಮೂಲಕ ನೀಡಿದ ಶ್ರೀಮನ್ಮಧ್ವಾಚಾರ್ಯರ 750ನೇ ಜಯಂತಿಯೂ ಪ್ರಾಪ್ತವಾಗಿದೆ ಎಂಬುದನ್ನು ಉಲ್ಲೇಖಿಸಬಹುದು. ಈ ಯುಗಪುರುಷರ ಸಂಬಂಧವಾಗಿಯೂ ಒಂದು ಕಾರ್ಯಕ್ರಮವನ್ನು ವ್ಯವಸ್ಥೆ ಮಾಡುವುದು ಪ್ರತಿಷ್ಠಾನದ ದೃಷ್ಟಿಯಲ್ಲಿದೆ.

**ಸಾಲಿ ರಾಮಚಂದ್ರರಾವ್** (ಜನ್ಮಶತಾಬ್ದ ಸಂಸ್ಮರಣ)*

ಕನ್ನಡದ ನೆಲದ ಪುಲ್ಲೆನಗೆ ಪಾವನ ತುಲಸಿ!
ಕನ್ನಡದ ನೆಲದ ನೀರ್ವೊನಲೆನಗೆ ದೇವನದಿ!
ಕನ್ನಡದ ನೆಲದ ಕಲ್ಲೆನಗೆ ಶಾಲಿಗ್ರಾಮ ಶಿಲೆ! ಕನ್ನಡಂ ದೈವಮೈ!
ಕನ್ನಡದ ಶಬ್ದಮೆನಗೋಂಕಾರಮೀಯೆನ್ನ
ಕನ್ನಡದ ನುಡಿಯೆ ಗಾಯತ್ರಿಯದ್ಭುತ ಮಂತ್ರ
ಮಿನ್ನಾವುದೈ ಪೆರತು ಕನ್ನಡನ ಸೇವೆಯಿಂದಧಿಕಮೀ ಜಗದೊಳೆನಗೆ?

ಈ ಶತಮಾನದ ನಾಲ್ವತ್ತರ ದಶಕದಲ್ಲಿ, ಉತ್ತರ ಕರ್ನಾಟಕದ ಒಬ್ಬ ಪ್ರಮುಖ. ಸಾತ್ವಿಕ ಸರಸ ಕಾವ್ಯರ್ಷಿ ಸಾಲಿ ರಾಮಚಂದ್ರರಾಯರು ರಚಿಸಿದ ಒಂದು ಕವನವಿದು. ಸಾಲಿ ಅವರ ಕಾವ್ಯಕೃತಿಯ ಮುಖ್ಯ ಲಕ್ಷಣಗಳೆಂದರೆ, ಅಚಲವಾದ ಭಕ್ತಿ. ಆಳವಾದ ದೇಶಪ್ರೇಮ. ಅನಂತ ಅಂತಃಕರಣ. ಸಹೃದಯತೆ ಮತ್ತು ದುಃಖಗಳು ಪರಮಾತ್ಮನ ಪ್ರಸಾದವೆಂದು ಸ್ವೀಕರಿಸುವ ವಿಶಾಲ ಮನೋಭಾವ.

ಸಾಲಿಯವರು ಹುಟ್ಟಿದ್ದು ಬೆಳಗಾವಿ ಜಿಲ್ಲೆಯ ರಾಮದುರ್ಗದಲ್ಲಿ: 1888 ಅಕ್ಟೋಬರ್ ಹತ್ತರಂದು. ಮುಂದೆ ಎರಡು ವರುಷಗಳಲ್ಲಿ ತಂದೆಯ ವಿಯೋಗ. ಅದರ ಮುಂದೆ ಎಂಟು ವರುಷಗಳಲ್ಲಿ ತಾಯಿಯ ಸಾವು. ಅವರ ಮೂವತ್ತನೇ ವಯಸ್ಸಿಗೆ ಪತ್ನಿಯ ಅಗಲುವಿಕೆ. ಹೆಂಡತಿ ಸತ್ತ ಹತ್ತೇ ವರುಷಗಳಲ್ಲಿ ಹದಿನೆಂಟು ವಯಸ್ಸಿನ ಏಕಮೇವ ಪುತ್ರ ಶ್ರೀಕೃಷ್ಣನ ಮರಣ! ಅವರ ಬಾಳೆಲ್ಲವೂ ಕಣ್ಣೀರುಗಳಲ್ಲಿಯೇ ಕರಗಿಹೋಗಿದೆ. ಮಗನ ಆಕಸ್ಮಿಕ ಸಾವಿನಿಂದ ತಂದೆಗೆ ಅಪಾರ ದುಃಖ

* 9-10-1988ರ ಪ್ರಜಾವಾಣಿ ಪತ್ರಿಕೆಯ ಸಾಪ್ತಾಹಿಕ ಪುರವಣಿಯಲ್ಲಿ ಶ್ರೀ ಗೋವಿಂದಮೂರ್ತಿ ದೇಸಾಯಿಯವರು ಬರೆದ ಲೇಖನದ ಸಂಕ್ಷಿಪ್ತರೂಪ.

ವಾಯಿತು. 1930ರ ಉಪ್ಪಿನ ಸತ್ಯಾಗ್ರಹದ ನಂತರ ದೇಶದಲ್ಲಿ ಅಲ್ಲೋಲಕಲ್ಲೋಲ ವಾಯಿತು. ಸೊಲ್ಲಾಪುರದಲ್ಲಿ ಚಳವಳಿಯನ್ನು ಹತ್ತಿಕ್ಕಲು ಬ್ರಿಟಿಷರು ದಂಡಿನ ಆಳಿಕೆಯನ್ನು ಹೇರಿದರು. ಅಲ್ಲಿ ಗುಪ್ತವಾಗಿ ಸರಕಾರದ ವಿರುದ್ಧ ಕಾರ್ಯ ಮಾಡಲು ಸ್ವಯಂಸೇವಕರು ಬೇಕಾಗಿದ್ದರು. ಸಾಲಿ ಅವರ ಮಗ ಶ್ರೀಕೃಷ್ಣ ಅಲ್ಲಿ ಹೋಗಿ ಕಾರ್ಯ ಮಾಡಿದ. ಅಲ್ಲಿಂದ ಬರುವಾಗ ಜ್ವರವನ್ನು ತಂದ. ಮುಂದೆ ಸತ್ತೇ ಹೋದ. ಈ ಆಘಾತವನ್ನು ತಡೆದುಕೊಳ್ಳುವುದು ಸಾಲಿಯವರಿಗೆ ಆಗಲಿಲ್ಲ. ಮಗನ ಸಾವನ್ನು ಮರೆಯಲು 'ತಿಲಾಂಜಲಿ' ಅನ್ನುವ ಸುದೀರ್ಘ ದುಃಖಗೀತವನ್ನು ಬರೆದರು. ಪ್ರಾಯಶಃ ಸಾವಿನ ದುಃಖವನ್ನು ಮರೆಯಲು ಶೋಕಗೀತವನ್ನು ರಚಿಸಿದ್ದು ಸಾಲಿಯವರದೇ ಕನ್ನಡದಲ್ಲಿ ಪ್ರಥಮವೇನೋ! 'ತಿಲಾಂಜಲಿ'ಯಲ್ಲಿ :

ರಣಗೊಂಬು ಕರೆದೊಡನೆ
ಕುಣಿದುದಾತನ ಹೃದಯ!
ಮಣಿದೆನ್ನ ಕಾಲ್ಗಳಿಗೆ
ರಣಕೆ ನಡೆದನು ವೀರ!

ಎಂದು ಹೇಳಿದ ಕವಿ :

ರೆಕ್ಕೆ ಮೊಳೆಯದ ಮುನ್ನ
ಹಕ್ಕಿ ಹಾರಲು ಹೋಗಿ
ಕಕ್ಕುತಲಿ ನೆತ್ತರನು
ಮುಕ್ಕದಿರುವದೆ ಮಣ್ಣು

ಎಂದು, ತಮ್ಮನ್ನು ತಾವೇ ಸಮಾಧಾನಪಡಿಸಿಕೊಂಡಿದ್ದಾರೆ. ಈ ಶೋಕಕಾವ್ಯ ನಾಲ್ವತ್ತೆಂಟು ನುಡಿಗಳಲ್ಲಿ ಹರಡಿದೆ. ಈ 'ತಿಲಾಂಜಲಿ' ಇಡಿಯಾಗಿ ಬರೆದುದಲ್ಲ. ಬಿಡಿಬಿಡಿಯಾಗಿ ಬರೆದು ಅವರು ಮೆಲ್ಲನೆ ತಮ್ಮ ದುಃಖವನ್ನು ಮರೆತರು. ಆಗಾಗ ಮೂಡಿಬಂದ ಈ ಸಾಲುಗಳನ್ನೆಲ್ಲಾ ಸಂಗ್ರಹಿಸಿ, ಅದಕ್ಕೊಂದು ರೂಪ ಕೊಟ್ಟು, ಕವಿಯ ಭಾವನೆಗಳಿಗೆ ತಕ್ಕದಾದ ಮುನ್ನುಡಿ ಬರೆದು ಪ್ರಕಟನೆಗೆ ಸಿದ್ಧಪಡಿಸಿದವರು ಪ್ರೊ॥ ಆರ್. ವ್ಹಿ. ಜಾಗೀರದಾರ ಅಥವಾ ಸುಪ್ರಸಿದ್ಧ ನಾಟಕಕಾರ ಆದ್ಯ ರಂಗಾಚಾರ್ಯರು. ಅಂದವಾಗಿ 1932ರಲ್ಲಿ ಪ್ರಕಟವಾದ 'ತಿಲಾಂಜಲಿ' ಹೊರಬಂದಾಗ ಸಾಲಿಯವರ ಸ್ವಾಸ್ಥ್ಯ ಸ್ಥಿಮಿತಕ್ಕೆ ಬಂದಿತು. ಸಾಲಿ ಅವರು ಬದುಕಿದ್ದು ತೊಂಬತ್ತು ವರುಷ. (ಅಕ್ಟೋಬರ್ 31, 1978).

**ಆದರ್ಶ**

ಸಾಲಿಯವರಿಗೆ ಸುಧಾಮನು ಒಬ್ಬ ಆದರ್ಶ ಪುರುಷ. ಹುಟ್ಟಿನಿಂದಲೂ ಇವರು ದಟ್ಟದಾರಿದ್ರ್ಯದ ಬೆನ್ನುಹತ್ತಿ ಬೆಳೆದವರು! ಮನೆಮನೆಗೆ ಹೋಗಿ ವಾರಾನ್ನ ವನ್ನುಂಡು ಹೈಸ್ಕೂಲು ಸೇರಿ, ವಿಜಾಪುರದಿಂದ ಮೆಟ್ರಿಕ್ ಪಾಸಾದರು. ಮೆಟ್ರಿಕ್



ಆದೊಡನೆ ಒಂದು ವರುಷ ಅಂಚೆ ಕಚೇರಿಯಲ್ಲಿ ಕಾರಕೂನರಾಗಿ ದುಡಿದರು. ಯಾರನ್ನೂ ಬೇಡಬಾರದೆಂಬ ಛಲವನ್ನು ತೊಟ್ಟ ರಾಯರನ್ನು ಬದುಕು ನಿರ್ವೀರ್ಯರನ್ನಾಗಿ ಮಾಡಿತು. ಆಗೀಗ ಜ್ವರ, ಒಂದು ವರುಷ ಶಿಕ್ಷಣ ನಡೆದರೆ ಇನ್ನೊಂದು ವರುಷ ಶಿಕ್ಷಣವಿಲ್ಲ. ಹೀಗೆ ಅಸ್ಥಿರ ಜೀವನವನ್ನು ನಡೆಸಿಕೊಂಡು ಬಂದರು. ಲೋಕಮಾನ್ಯ ತಿಲಕರ ಪ್ರಭಾವದಿಂದ ಶಿಕ್ಷಣವನ್ನು ನಿಲ್ಲಿಸಿ ರಾಷ್ಟ್ರೀಯ ಆಂದೋಲನವನ್ನು ಸೇರಿದರು. ಹೆಗಲ ಮೇಲೆ ಖಾದಿ ಹೊತ್ತು ಮನೆಮನೆಗೆ ಹೋಗಿ ಮಾರಿದರು. ಗಾಂಧೀಜಿಯವರ ಪರಮ ಶಿಷ್ಯರಾದರು. 1924ರಲ್ಲಿ ಬೆಳಗಾವಿಯಲ್ಲಿ ನಡೆದ 39ನೇ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಧಿವೇಶನದಲ್ಲಿ ಗಾಂಧೀಜಿಯವರ ಹಿಂದಿ ಭಾಷಣವನ್ನು ಅನುವಾದಿಸಿದವರು ಸಾಲಿ ರಾಮಚಂದ್ರರಾಯರು! ಅವರು ಸೆರೆಮನೆಗೆ ಹೋಗಲಿಲ್ಲ. ಆದರೆ ದೇಶಪ್ರೇಮದಲ್ಲಿ ಜೇಲನ್ನು ಕಂಡುಬಂದವರಿಗಿಂತ ಅವರ ದೇಶಪ್ರೇಮವೇನೂ ಕಡಿಮೆಯಲ್ಲ! 1930 ರಲ್ಲಿ ಉಪ್ಪಿನ ಸತ್ಯಾಗ್ರಹದ ಕಾಲಕ್ಕೆ ಧಾರವಾಡದ ಕಡಪಾ ಬಯಲಿನಲ್ಲಿ ದಿವಾಕರ ರಂಗರಾಯರು ನಿಷೇಧಿತ ಉಪ್ಪನ್ನು ತಂದು ಸ್ಫೂರ್ತಿದಾಯಕವಾಗಿ ಮಾತನಾಡಿದರು. ಆಗ ಶ್ರೋತೃಗಳಲ್ಲಿ ಒಬ್ಬರಾದ ಸಾಲಿಯವರು ಎದ್ದು ಬಂದು, ವೇದಿಕೆಗೆ ಹೋಗಿ, "ರಾಷ್ಟ್ರದ ಕಣ್ಮಣಿಯ ಬಂಧನವೆಂದರೆ ರಾಷ್ಟ್ರಕ್ಕೆ ಅವಮಾನ. ನಾನಿದನ್ನು ಸಹಿಸಲಾರೆ" ಎಂದು ಹೇಳಿ, ದಿವಾಕರರು ಮಾರುತ್ತಿದ್ದ ನಿಷೇಧಿತ ಉಪ್ಪಿನ ಪೊಟ್ಟಣವನ್ನು ಕೊಂಡು "ಕಾಯಿದೆ ಭಂಗ" ಮಾಡಿದರು. 1942 ರಲ್ಲಿ ಅವರ ಮನೆ ಭೂಗತ ಚಳವಳಿಗಾರರಿಗೆ ಆಶ್ರಯ ಸ್ಥಾನವಾಗಿತ್ತು. ಜರ್ಲಿ ಜಿಂದುಮಾಧವರಿಗೆ ಮತ್ತು ಸುಪ್ರಸಿದ್ಧ ಸ್ವಾತಂತ್ರ್ಯ ಯೋಧ ಎಚ್. ವಿ. ರಾಮಚಂದ್ರರಾಯರಿಗೆ ಸಾಧನಕೇರಿಯಲ್ಲಿದ್ದ ಅವರ ಮನೆ ಮುಕ್ತದ್ವಾರವಿತ್ತು. ಅಂತಲೇ ದೇಶಪ್ರೇಮ ಅವರ ಕಾವ್ಯದ ಜೀವಾಳವಾಗಿದೆ.

1907ರಲ್ಲಿ ಮೆಟ್ರಿಕ್ ಪಾಸಾದರೂ, 1917ರಲ್ಲಿ ಪುಣೆಯ ಫರ್ಗ್ಯುಸನ್ ಕಾಲೇಜಿನಿಂದ ಬಿ.ಎ. ಪದವೀಧರರಾದರು. ಅವರ ಶಿಕ್ಷಣ ಹರಿಗಡಿಯಲಿಕ್ಕೆ ದಾರಿದ್ರ್ಯ ಒಂದು ಬಲವಾದ ಕಾರಣ. ಸಾಲಿ ಅವರು ಪುಣೆಯಲ್ಲಿ ಇರುವಾಗ ಆಲೂರ ವೆಂಕಟರಾಯರು ಕರ್ನಾಟಕತ್ವವನ್ನು ಬೆನ್ನಿಗಂಟಿಸಿಕೊಂಡು, ಪುಣೆಗೆ ಬಂದರು. ಅಲ್ಲಿಯ ಫರ್ಗ್ಯುಸನ್ ಕಾಲೇಜಿನ ಮಿತ್ರಮಂಡಳಿಯನ್ನು ಕಂಡರು. ಆಗ ಆ ಮಿತ್ರಮಂಡಳಿಯವರು ಸಾಲಿಯವರನ್ನು ಕವಿಯೆಂದೇ ಪರಿಚಯಿಸಿಕೊಟ್ಟರು. ಆಗ ಸಾಲಿ ಅವರು ಆಲೂರ ವೆಂಕಟರಾಯರ ಮುಂದೆ 'ಹಂಬಲು' ಅನ್ನುವ ತಮ್ಮ ಒಂದು ಕವಿತೆಯನ್ನು ಓದಿದರು. ಆ ಕವಿತೆಯನ್ನು ಮೆಚ್ಚಿಕೊಂಡ ಆಲೂರರು ಅದನ್ನು ತಮ್ಮೊಡನೆ ತೆಗೆದುಕೊಂಡು ಹೋಗಿ ಧಾರವಾಡದ ವಿದ್ಯಾವರ್ಧಕ ಸಂಘದ ಮುಖಪತ್ರಿಕೆ 'ವಾಗ್ಭೂಷಣ'ದಲ್ಲಿ ಪ್ರಕಟಿಸಿದರು. ಅದು ವಾಗ್ಭೂಷಣದಲ್ಲಿ ಪ್ರಕಟಗೊಂಡಿದ್ದರಿಂದ, ಸಾಲಿಯವರು ಬಹು ಎತ್ತರದ ಕವಿಯೆಂದು ನಾಡ ಜನರು ಮನ್ನಿಸುವಂತಾಯಿತು.

**ಬಹುಭಾಷಾ ವಿಶಾರದ**

ಸಾಲಿ ಅವರು ಬಹುಭಾಷಾ ವಿಶಾರದರು. ಅವರಿಗೆ ಪಾಲಿ, ಮರಾಠಿ, ಗುಜರಾತಿ ಭಾಷೆಗಳು ಚೆನ್ನಾಗಿ ಬರುತ್ತಿದ್ದವು. ಸಂಸ್ಕೃತದಲ್ಲಿಯಂತೂ ಅವರಿಗೆ ಕನ್ನಡದಷ್ಟೇ ಪ್ರಾವೀಣ್ಯವಿತ್ತು. ಅವರು ಸಂಸ್ಕೃತದಲ್ಲಿ 'ಅಸತ್ಯ ಅಷ್ಟೋತ್ತರ-ಶತಕಮ್, ವಾಸುದೇವ ಶತಕಮ್, ಅಭಿಸಾರಮ್, ಸುಧಾಮ ಚರಿತಮ್ ಹಾಗೂ ಗದ್ಯ ರಾಮಾಯಣಮ್' ಎಂಬ ಕೃತಿಗಳನ್ನು ರಚಿಸಿದ್ದಾರೆ. ಉದಕಮಂಡಲಕ್ಕೆ ಹೋಗಿ ಅಲ್ಲಿಯ ಮೂಲ ಪಾಲೀಗ್ರಂಥದಿಂದ ನೂರರಷ್ಟು ಜಾತಕ ಕಥೆಗಳನ್ನು ತಂದಿದ್ದಾರೆ. 'ಹಿಂದೂಸ್ತಾನದ ಇತಿಹಾಸ' ಎಂಬ ಶಾಲೋಪಯೋಗಿ ಪುಸ್ತಕವನ್ನು ಮೂಲ ಗುಜರಾತಿಯಿಂದ ಭಾಷಾಂತರಿಸಿದರು.

'ತಿಲಾಂಜಲಿ, ಕುಸುಮಾಂಜಲಿ, ಅಭಿಸಾರ, ಚಿಗುರೆಲೆ, ಚಿತ್ರಸೃಷ್ಟಿ' ಅವರ ಕವನಸಂಗ್ರಹಗಳು. 'ಜಯ ಗುರುದೇವ, ಯದುಪತಿ' ಅವರ ಎರಡು ಕಾದಂಬರಿಗಳು. 'ಸುಕನ್ಯೆ' ಅವರ ಒಂದು ನಾಟಕ. ಇದಲ್ಲದೆ 'ಸ್ಥಿತಪ್ರಜ್ಞದರ್ಶನ' ಎನ್ನುವ ವಿನೋಬಾರವರ ಕೃತಿಯನ್ನು ಮರಾಠಿಯಿಂದ ಕನ್ನಡಕ್ಕೆ ತಂದಿದ್ದಾರೆ. ಅಲ್ಲದೆ, ಕಾಕಾ ಕಾಲೇಲಕರರ ಗುಜರಾತಿ ಪುಸ್ತಕ 'ಜೀವನ ಲೀಲೆ'ಯನ್ನು ಅನುವಾದ ಮಾಡಿದ್ದಾರೆ.

ವಾಲ್ಮೀಕಿ ರಾಮಾಯಣವನ್ನು ಪದ್ಯರೂಪದಲ್ಲಿ ಬರೆದು, ಸಾಮಾನ್ಯರಿಗೂ ಅದು ತಿಳಿಯುವಂತೆ ಮಹಾಕಾವ್ಯವನ್ನು ಬರೆಯುವ ಬೃಹತ್ ಯೋಜನೆಯನ್ನು ಹಾಕಿಕೊಂಡರು ಸಾಲಿ ರಾಮಚಂದ್ರರಾಯರು!

ಶ್ರೀ ರಘುಕುಲಮಣಿ
ವೀರ ಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು

ಎಂದು ಶುರುವಾಗುವ 'ಶ್ರೀರಾಮ ಚರಿತವು' ಎನ್ನುವ ಮಹಾಕಾವ್ಯ ಪ್ರಾರಂಭವಾಯಿತು. ಮೊದಲಿನ ಎರಡು—ಬಾಲಕಾಂಡ ಮತ್ತು ಅಯೋಧ್ಯಾಕಾಂಡ—ಎನ್ನುವ ಕೃತಿಗಳು ಹೊರಬಂದವು. ಈ ಎರಡೂ ಕಾಂಡಗಳು ಹೊರಬಂದಾಗ ಮನೆ ಮನೆಯಲ್ಲಿ ಇವನ್ನು ಹೆಣ್ಣುಮಕ್ಕಳು ಪಠಿಸಿ ಹಾಡುತ್ತಿದ್ದರು. ಶ್ರೀರಂಗರು ಸಾಲಿ ಅವರ ರಾಮಾಯಣವನ್ನು 'ಆಧುನಿಕ ಮಹಾಕಾವ್ಯ' ಎಂದು ಹೊಗಳಿದರು. ಅನೇಕರು ಮೆಚ್ಚಿದರು ಮತ್ತೆ ಕೆಲವರು ಅದನ್ನು ಕಟುವಾಗಿ ಟೀಕಿಸಿದರು.

"ಸ್ವಂತವನ್ನು ಬರೆಯಲಾರದವನು ಹಳೆಯದನ್ನು ಬರೆಯುತ್ತಾನೆ: ಹಳಸಿದ್ದನ್ನು ಬರೆಯುತ್ತಾನೆ" ಎಂದು ಕಟುವಾಗಿ ಟೀಕಿಸಿದವರು ಹಲವರು. "ಇದರಲ್ಲೇನಿದೆ?"

ಎಂದು ಮೂಗು ಮುರಿದ ಒಂದು ಗುಂಪಿನವರು ಸಾಲಿಯವರ ಮೇಲೆ ದಾಳಿಯನ್ನು ಮಾಡಿದರು. ಆದರೆ ಇದೆಲ್ಲವೂ ಶಾಬ್ದಿಕ ದಾಳಿ. ಧಾರವಾಡದಲ್ಲಿ ಸಾಹಿತ್ಯಕ ಚಟುವಟಿಕೆಗಳಲ್ಲಿ ತೊಡಗಿದ್ದ ಗೆಳೆಯರ ಗುಂಪು ಮಿಶ್ರ ಪ್ರತಿಕ್ರಿಯೆಯನ್ನು ತೋರಿಸಿತು. ದ.ರಾ. ಬೇಂದ್ರೆ, ಬೆಟಗೇರಿ ಕೃಷ್ಣಶರ್ಮರು, ಶಂಭಾ ಜೋಶಿ, ಪ್ರಹ್ಲಾದ ನರೇಗಲ್, ಶಂ.ಗೋ. ಕುಲಕರ್ಣಿ, ಕೃಷ್ಣಕುಮಾರ ಕಲ್ಲೂರ ಮೊದಲಾದವರಲ್ಲಿ ಈ ರಾಮಾಯಣದ ಬಗ್ಗೆ ಭಿನ್ನಾಭಿಪ್ರಾಯಗಳು ಮೂಡಿ ಬಂದವು.

**ಹುಟ್ಟು ಶಿಕ್ಷಕ**

ಸಾಲಿಯವರು ಕವಿಯಾಗಿ ಬಾಳಿದಂತೆ, ಶಿಕ್ಷಕರಾಗಿಯೂ ಬಾಳಿದರು. ಒಂದು ವರುಷ 'ಜಯಕರ್ನಾಟಕ' ಪತ್ರಿಕೆಯಲ್ಲಿ ಸಹ ಸಂಪಾದಕರಾಗಿದ್ದರು. ಅನಂತರ ರಾಷ್ಟ್ರೀಯ ಶಾಲೆಯಲ್ಲಿ ಶಿಕ್ಷಕರಾಗಿದ್ದರು. 1928 – 1946ರ ವರೆಗೆ ಧಾರವಾಡದ ಕರ್ನಾಟಕ ಹೈಸ್ಕೂಲಿನಲ್ಲಿ ಶಿಕ್ಷಕರಾಗಿ ತಮ್ಮ ಅನುಭವವನ್ನೆಲ್ಲಾ ಶಿಷ್ಯರೊಂದಿಗೆ ಹಂಚಿಕೊಂಡರು. ಆ ಹದಿನೆಂಟು ವರುಷಗಳು, ಸಾಲಿಯವರ ಜೀವನದ ಅಮೂಲ್ಯ ವರುಷಗಳು. ಅವರೊಬ್ಬ ಆದರ್ಶ ಶಿಕ್ಷಕರು. ಶಾಲೆಯಲ್ಲಿ ತಪ್ಪಿ ಕೂಡ ಬಿರುಸು ಮಾತುಗಳನ್ನು ಆಡುತ್ತಿರಲಿಲ್ಲ. ವಿದ್ಯಾರ್ಥಿಗಳು ಮನೆಯಲ್ಲಿ ಪಾಠ ಮಾಡಿಕೊಂಡು ಬರಲು ತಪ್ಪಿದರೆ ಅಥವಾ ತಾವು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡದಿದ್ದರೆ, ತಪ್ಪು ತಮ್ಮದೆಂದು ತಾವೇ ಒಂಟಿ ಕಾಲಿನ ಮೇಲೆ ನಿಂತು ಶಿಕ್ಷೆಯನ್ನು ಅನುಭವಿಸುತ್ತಿದ್ದರು. ಇದರಿಂದ ಶಿಷ್ಯರು ನಾಚಿಕೊಂಡು ಹಾದಿಗೆ ಬರುತ್ತಿದ್ದರು. ಸಾಲಿ ಅವರ ಕಾವ್ಯ ಕುರಿತು 'ಪಿ.ಇ.ಎನ್'ದಲ್ಲಿ ಬರೆಯುತ್ತ ಆ.ನ. ಕೃಷ್ಣರಾಯರು ಹೇಳುತ್ತಾರೆ :

"Shri Sali is essentially a poet of moods and sentiments. Poetry to him is neither diversion nor a means of publicity. It is a breath of his life. The main current of Sali's poetry is ethical...Sali writes a charming style."

ಶ್ರೀ ಸಾಲಿ ಅವರು ಮೂಲತಃ ಭಾವನಾಪ್ರಧಾನ ಕವಿ. ಕಾವ್ಯ ಅವರಿಗೆ ವಿನೋದವಲ್ಲ; ಪ್ರಚಾರದ ಸಾಧನವಲ್ಲ; ಅದೊಂದು ಅವರ ಜೀವನದ ಉಸಿರು. ಅವರ ಕಾವ್ಯದಲ್ಲಿ ಪ್ರವಹಿಸುತ್ತಿರುವುದು ನೀತಿತತ್ತ್ವ–ಸಾಲಿ ಅವರು ಸುಂದರ ಶೈಲಿಯಲ್ಲಿ ಬರೆಯುತ್ತಾರೆ.

ಬಿ.ಎಂ.ಶ್ರೀ., ವಿ.ಕೃ. ಗೋಕಾಕ, ಶ್ರೀರಂಗರು, ಬೆಟಗೇರಿ ಕೃಷ್ಣಶರ್ಮರು, ಬಿ.ಎಚ್. ಶ್ರೀಧರರು, ಸಾಲಿ ಅವರ ಕಾವ್ಯವನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ಸಾಲಿ ಅವರು ಅಜಾತಶತ್ರು. ಅವರೆಂದೂ ಯಾರನ್ನೂ ದ್ವೇಷ ಮಾಡುತ್ತಿರಲಿಲ್ಲ. ಕಠೋರ ಶಬ್ದಗಳನ್ನು ಎಂತಹ ದುರ್ಧರ ಪ್ರಸಂಗದಲ್ಲಿಯೂ ಅವರು ಬಳಸ

ನಾಡಲಿಲ್ಲ. ಸಾಲಿಯವರ ಸ್ವಭಾವ ಅದೆಷ್ಟು ಮೃದುವಾಗಿತ್ತೆಂದರೆ. ಒಬ್ಬ ಕಟುಕ ವಧಶಾಲೆಗೆ ಆಕಳನ್ನು ಎಳೆದೊಯ್ಯುವದನ್ನು ನೋಡಿ ಸಾಲಿಯವರು ಮರುಗಿದರು. ಆ ಆಕಳ ದೈನ್ಯಾವಸ್ಥೆಯನ್ನು ಕಂಡು, ಅವನಿಗೆ 15 ರೂಪಾಯಿ ಕೊಟ್ಟು ಮಾರಲಿಕ್ಕೆ ತೆಗೆದುಕೊಂಡರು. ಮುಂದೆ ಆ ಗೋವನ್ನು ಅವರೇ ಸಾಕಿದರು.

ಸಾಲಿ ಅವರ ಮನೆ ಸಾಹಿತಿಗಳ ಕೂಟವಾಗುತ್ತಿತ್ತು. ಬಿ.ಎಂ.ಶ್ರೀ. ಮಾಸ್ತಿ, ಕೈಲಾಸಮ್, ತಿ.ತಾ. ಶರ್ಮ. ಅ.ನ.ಕೃ., ಹೊಯ್ಸಳರು ಅವರ ಆತಿಥ್ಯವನ್ನು ಸ್ವೀಕರಿಸಿದ್ದಾರೆ. ಹಾಗೆ ನೋಡಿದರೆ ಅವರಿಗೆ ಇಬ್ಬರೇ ಹೆಣ್ಣುಮಕ್ಕಳು–ಸುಬ್ಬಕ್ಕ ಮತ್ತು ಭಾಗೀರಥಿ. ಆದರೆ ಅವರು ದತ್ತು ಪಡೆದ ಹೆಣ್ಣುಮಕ್ಕಳು ಹಲವಾರು. ಅವರಲ್ಲಿ ಹಲವರ ವಿವಾಹಗಳನ್ನು ಇವರೇ ನಿಂತು ಮಾಡಿದ್ದಾರೆ.

ಮಹಾನುಭಾವರಿಗೆ ವಿಶ್ವವೆಲ್ಲಾ ತಮ್ಮ ಕುಟುಂಬವೆಂಬಂತೆ, ಸಾಲಿಯವರಿಗೆ ತಮ್ಮ ಸುತ್ತಲಿನದೆಲ್ಲಾ ತಮ್ಮದೇ ಪ್ರಪಂಚದಂತೆ ಕಾಣುತ್ತಿತ್ತು. ಅವರ ಸಾಧನೆ ಹಿರಿದು, ಜೀವ ದೊಡ್ಡದು, ಬದುಕು ವಿಶಾಲವಾದದ್ದು! ಸಾಲಿಯವರು ಈ ಶತಮಾನದ ಮೂವತ್ತು ನಾಲ್ವತ್ತರ ದಶಕಗಳ ಒಬ್ಬ ಸಾತ್ವಿಕ ಕವಿ, ಸಂತ ಕವಿ, ಅದಕ್ಕೂ ಹೆಚ್ಚು ಒಬ್ಬ ಒಳ್ಳೆಯ ಮನುಷ್ಯ!

## ಅಭಿವ್ಯಕ್ತಿ ಸ್ವಾತಂತ್ರ್ಯ

ಭಾರತ ಸಂಜಾತನೂ ಬ್ರಿಟಿಷ್ ಪ್ರಜೆಯೂ ಮಹಮ್ಮದೀಯ ಧರ್ಮಾನುಯಾಯಿಯೂ ಆದ ಸಲ್ಮಾನ್ ರಷ್ದೀ ಅವರು ರಚಿಸಿರುವ ಕಾದಂಬರಿ Satanic Verses ಮಹಮ್ಮದೀಯ ಧರ್ಮಕ್ಕೆ ಅಪಚಾರ ಮಾಡಿದೆ ಎಂಬ ಆರೋಪವನ್ನು ಹೊರಿಸಿ ಇರಾನ್ ದೇಶದ ಸರ್ಕಾರ ಗ್ರಂಥಕರ್ತನಿಂದ ಬೇಷರತ್ ಕ್ಷಮಾಯಾಚನೆಯನ್ನು ಕೋರಿತು. ಇದಕ್ಕೆ ರಷ್ದಿ ಮೊದಲು ಒಪ್ಪದಿದ್ದರೂ, ಬಳಿಕ ತಮ್ಮ ವಿಷಾದವನ್ನು ವ್ಯಕ್ತಪಡಿಸಿದರು. ಇರಾನು ತನ್ನ ನಿಲುವನ್ನು ಬದಲಾಯಿಸಿಕೊಂಡಿತು : ರಷ್ದಿಯವರ ವಿಷಾದ ವಚನ ಸಾಲದಾಯಿತು ; ಅವರ ತಲೆದಂಡವನ್ನು ಒತ್ತಾಯಿಸಿ ಕೇಳಿರುವುದಲ್ಲದೆ. ಅವರಿಗೆ ಬೆಂಬಲ ಸೂಚಿಸುವ ರಾಷ್ಟ್ರಗಳಿಗೂ ವ್ಯಕ್ತಿಗಳಿಗೂ ಭಯೋತ್ಪಾದಕ ಬೆದರಿಕೆ ಹಾಕಿದೆ. ಯುರೋಪಿನ ಬಹು ರಾಷ್ಟ್ರಗಳು ರಷ್ದಿಗೆ ಬೆಂಬಲವಾಗಿ ನಿಂತು, ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಎತ್ತಿಹಿಡಿದಿವೆ. ರಷ್ದಿ ವಿರುದ್ಧ ಮುಸ್ಲಿಂ ರಾಷ್ಟ್ರಗಳು ಮತ್ತು ಮುಸ್ಲಿಂ ಜನಕೋಟಿ, ಮತ್ತು ರಷ್ದಿ ಪರ ಮುಸ್ಲಿಮೇತರ ರಾಷ್ಟ್ರಗಳು ಮತ್ತು ಜನಕೋಟಿ–ಹೀಗೆ ಎರಡು ಜಾಗತಿಕ ಬಣಗಳು ಏರ್ಪಟ್ಟು. ಪರಿಸ್ಥಿತಿ ಈಗಿಗಿಂತ ಹೆಚ್ಚು ಪ್ರಕೋಪಕ್ಕೆ ಹೋಗುವ ಸೂಚನೆಗಳಿವೆ. ಪರಿಣಾಮ ಎಂತೋ ಏನೋ ಊಹಿಸಲು ಸಾಧ್ಯವಿಲ್ಲ. ಈ ಸಂದರ್ಭದಲ್ಲಿ ಅಲ್ಪಸಂಖ್ಯಾತರನ್ನು ಮೆಚ್ಚಿಸುವ ಸಲುವಾಗಿಯೋ ದುಷ್ಪರಿಣಾಮ

ಗಳುಂಟಾಗಬಹುದು ಎಂಬ ಕಾರಣದಿಂದಲೋ, ಭಾರತ ಸರ್ಕಾರ ಭಾರತದಲ್ಲಿ ರಷ್ದಿ ಕೃತಿಯ ಪ್ರಸಾರಕ್ಕೆ ತಡೆ ಒಡ್ಡಿದೆ!

ಸೃಜನಶೀಲ ಸಾಹಿತ್ಯಕ್ಕೆ ಮಾತ್ರ ಅನ್ವಯಿಸುವ ಮಾತಲ್ಲ, ಅಭಿವ್ಯಕ್ತಿ ಸ್ವಾತಂತ್ರ್ಯ ಎನ್ನುವುದು. ಸತ್ಯಾನ್ವೇಷಣೆಯನ್ನೇ ಗುರಿಯಾಗುಳ್ಳ ಸಂಶೋಧನೆ ಕೆಲವರಿಗೋ ಹಲವರಿಗೋ ಅಪ್ರಿಯವಾಗಬಹುದಾದ ಸತ್ಯವನ್ನು ಹೊರಗೆಡಹಿದಾಗ, ಸತ್ಯಪ್ರೇಮಿ ಯಾರಾದರೊಬ್ಬರ ವಿರೋಧವನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಇದು ಸ್ವಾಭಾವಿಕ. ಆದರೆ ಸಂಶೋಧಕ ಸಾವಿನ ನೆರಳಿನಲ್ಲಿ ಬದುಕುವಂತಾಗಬಾರದು; ಸಾಕ್ರಟೀಸ್‌ನ ಕಾಲಕ್ಕೂ ಈಗಿನದಕ್ಕೂ ನಡುವಣ ಅಂತರ ಅಳಿಸಿಹೋದಂತಿದೆ. Let as not insult Truth for fear of offending men ಎಂಬ ಟಾಗೂರರ ಮಾತಾಗಲಿ, "ಕಸವರಮೆಂಬುದು ನೆರೆಸೈರಿಸಲಾಪ್ಪೊಡೆ ಪರವಿಚಾರಮುಂ ಧರ್ಮಮುಮಂ" ಎಂಬ ಕವಿರಾಜಮಾರ್ಗಕಾರನ ಮಾತಾಗಲಿ ಪೂರ್ಣ ಫಲಿಸುವು ದೆಂದಿಗೆ?

## ಅಭಿನಂದನೆ

**ಡಾ॥ ಕುವೆಂಪು ಅವರಿಗೆ ಪಂಪ ಪ್ರಶಸ್ತಿ:** ನಮ್ಮ ದೇಶದಲ್ಲಿ ಬಹುವರ್ಷಗಳಿಂದ ನಡೆದುಬರುತ್ತಿರುವ ಒಂದು ಲಕ್ಷ ರೂಪಾಯಿಯ (ಈಗ ಇದು ಒಂದೂವರೆ ಲಕ್ಷ) ಖಾಸಗಿ ಜ್ಞಾನಪೀಠ ಪ್ರಶಸ್ತಿಯ ಸಾಲಿಗೆ ಬೇರೆ ಬೇರೆ ರಾಜ್ಯಗಳು ಸಾಹಿತ್ಯ ಸಂಗೀತಾದಿ ಕಲೆಗಳಿಗೆ ಉತ್ತೇಜನ ನೀಡಲು ಒಂದು ಲಕ್ಷ ರೂಪಾಯಿಯ ಪ್ರಶಸ್ತಿಗಳನ್ನು ಸ್ಥಾಪಿಸಲು ಮುಂದೆ ಬಂದಿದೆ. ಸ್ವಾತಂತ್ರ್ಯದ ನಲವತ್ತನೆಯ ವರ್ಷದ ಸಂದರ್ಭದಲ್ಲಿ ಕರ್ನಾಟಕ ರಾಜ್ಯ ಸರ್ಕಾರ ಒಂದು ಲಕ್ಷ ರೂಪಾಯಿಯ 'ಪಂಪಪ್ರಶಸ್ತಿ'ಯನ್ನು ಸ್ಥಾಪಿಸಿದೆ. ಸ್ವಾಗತಾರ್ಹವಾದ ಈ ನಿರ್ಧಾರವನ್ನು ಕೈಗೊಂಡ ರಾಜ್ಯ ಸರ್ಕಾರ ಕನ್ನಡಿಗರೆಲ್ಲರ ಅಭಿನಂದನೆಗೆ ಪಾತ್ರವಾಗಿದೆ. ಇದಕ್ಕೂ ಮೊದಲೆ ಸಂಗೀತಕ್ಕಾಗಿ ಪುರಂದರ ಪ್ರಶಸ್ತಿಯನ್ನು, ಚಲನಚಿತ್ರಕ್ಕಾಗಿ ಪುಟ್ಟಣ್ಣ ಕಣಗಾಲ್ ಪ್ರಶಸ್ತಿಯನ್ನು ನಮ್ಮ ಸರ್ಕಾರ ಸ್ಥಾಪಿಸಿರುವುದನ್ನು ಇಲ್ಲಿ ನೆನೆಯಬಹುದು.

1988ನೆಯ ಸಾಲಿಗಾಗಿ ಸೃಜನಶೀಲ ಕೃತಿಗೆಂದು ಗೊತ್ತುಮಾಡಿದ ಪ್ರಪ್ರಥಮ ಪುರಸ್ಕಾರವು ರಾಷ್ಟ್ರಕವಿ ಡಾ॥ ಕುವೆಂಪು ಅವರ ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯಕ್ಕೆ ಸಂದಿದೆ. ಈ ಮಹಾಕೃತಿ ಈಗಾಗಲೆ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನೂ ಜ್ಞಾನಪೀಠ ಪ್ರಶಸ್ತಿಯನ್ನೂ ಪಡೆದಿದೆ. ಇದೀಗ ಪಂಪಪ್ರಶಸ್ತಿಯನ್ನೂ ಗಳಿಸಿ ಒಂದು ವಿಕ್ರಮವನ್ನು ಸ್ಥಾಪಿಸಿದೆ. ಕನ್ನಡಿಗರೆಲ್ಲರೂ ಹೆಮ್ಮೆಪಡಬೇಕಾದ ಸಂಗತಿ. ಸನ್ಮಾನ್ಯ ಶ್ರೀ ಕುವೆಂಪು ಅವರಿಗೆ ಪ್ರತಿಷ್ಠಾನದ ಸದಸ್ಯರೆಲ್ಲರ ಪರವಾಗಿ. 'ಕರ್ನಾಟಕ ಲೋಚನ' ಹೃತ್ಪೂರ್ವಕ ಅಭಿವಂದನೆ–ಅಭಿನಂದನೆಗಳನ್ನು ಸಮರ್ಪಿಸುತ್ತದೆ.

**ಡಾ॥ ಟಿ. ವಿ. ವೆಂಕಟಾಚಲ ಶಾಸ್ತ್ರೀ ಅವರ ಚಿತ್ರಕಾವ್ಯಕ್ಕೆ ಪ್ರಶಸ್ತಿಗಳು :**

**ಚಿತ್ರಕಾವ್ಯ** ಎನ್ನುವುದು ಲಾಕ್ಷಣಿಕರಿಂದ ಅಧಮಕಾವ್ಯ ಅಪಪ್ರಥೆಗೆ ಒಳಗಾಗಿದೆ. ಛಂದಸ್ಸಿನ ಚೌಕಟ್ಟಿನಲ್ಲಿ ಚಕ್ರಬಂಧ, ಖಡ್ಗಬಂಧ, ಮಾಲಾಬಂಧ ಇತ್ಯಾದಿ ಶಾಬ್ದಿಕ ಚಮತ್ಕಾರಗಳುಳ್ಳ 'ಬಂಧ'ಗಳನ್ನೂ ಅರ್ಥಚಮತ್ಕಾರಗಳುಳ್ಳ ಅನೇಕ ಬಗೆಯ ಪ್ರಹೇಳಿಕೆಗಳನ್ನೂ ಇನ್ನಿತರ ರಚನಾಪ್ರಭೇದಗಳುಳ್ಳ ಪದ್ಯಜಾತಿಗಳನ್ನೂ ಈ ಚಿತ್ರಕಾವ್ಯ ಪ್ರಕಾರದಲ್ಲಿ ಲಾಕ್ಷಣಿಕರು ಸಮಾವೇಶ ಮಾಡಿದ್ದಾರೆ. ಪ್ರಾಚೀನ ಸಂಸ್ಕೃತ-ಕನ್ನಡ ಕವಿಗಳಲ್ಲಿ ಹಲಕೆಲವರು ತಮ್ಮ ಪಾಂಡಿತ್ಯ ಚಮತ್ಕಾರಗಳನ್ನು ಮೆರೆಯುವುದಕ್ಕಾಗಿ ಚಿತ್ರಕಾವ್ಯ ರಚನೆಯಲ್ಲಿ ತೊಡಗುವುದುಂಟು. ಈ ಪದ್ಯಜಾತಿಯಲ್ಲಿ ಆಶ್ಚರ್ಯಕರವಾದ ಶಬ್ದಾರ್ಥ ಚಮತ್ಕಾರಗಳಿರುತ್ತವೆಯೇ ಹೊರತು ಕಾವ್ಯಗುಣ ಲವಲೇಶವೂ ಇರುವುದಿಲ್ಲ. ಕನ್ನಡದ ಕೆಲವೇ ಮಂದಿ ಸಮರ್ಥ ಸಂಶೋಧಕರಲ್ಲಿ ಒಬ್ಬರಾದ ಡಾ॥ ಟಿ. ವಿ. ವೆಂಕಟಾಚಲ ಶಾಸ್ತ್ರಿಗಳು ಕನ್ನಡ ಛಂದಸ್ಸನ್ನು ತಲಸ್ಪರ್ಶಿಯಾಗಿ ವ್ಯಾಸಂಗಮಾಡಿ, ಆ ಶಾಸ್ತ್ರದಲ್ಲಿ ಅಮೂಲ್ಯವಾದ ಕೃತಿರಚನೆ ಮಾಡಿರುವ ಮೇಧಾವಿಗಳು. ಯಾರೂ ಲಕ್ಷ್ಯ ಕೊಡದಿದ್ದ ಚಿತ್ರಕಾವ್ಯ ವಿಷಯದ ಮೇಲೆ ಲಕ್ಷಣ-ಲಕ್ಷ್ಯ ಸಮೇತ ಸುಮಾರು 550 ಪುಟಗಳ ಹೊಬ್ಬೊತ್ತಗೆಯನ್ನು ರಚಿಸಿ, ಶ್ರೀಯುತರು, ಒಂದು ವಿಸ್ಮಯಕಾರಿ ವಿಕ್ರಮವನ್ನು ಸಾಧಿಸಿದ್ದಾರೆ. ಈ ಗ್ರಂಥ ಪ್ರಕಟವಾದ ತರುಣದಲ್ಲಿಯೇ ಗ್ರಂಥಲೋಕದ ಪ್ರಶಸ್ತಿ, ಐ.ಬಿ.ಹೆಚ್. ಪ್ರಕಾಶನದ ಪ್ರಶಸ್ತಿ, ಮತ್ತು 1987ರ ಸಾಲಿನ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ—ಹೀಗೆ ಸಾಲಾಗಿ ಮೂರು ಪ್ರಶಸ್ತಿಗಳನ್ನು ಪಡೆದು ಈ ಚಿತ್ರತಮ ಚಿತ್ರಕಾವ್ಯ ಒಂದು ಅಭೂತಪೂರ್ವ ಸಾಧನೆಯನ್ನು ಎಸಗಿದೆ. ಶ್ರೀ ಶಾಸ್ತ್ರಿಗಳಿಗೆ ನಮ್ಮ ಹೃತ್ಪೂರ್ವಕ ಅಭಿನಂದನೆಗಳು.

**ಡಾ॥ ಶಂಕರ ಮೊಕಾಶಿ ಪುಣೇಕರ್** ಅವರ **ಅವಧೇಶ್ವರಿ** ಎಂಬ ಕಾದಂಬರಿಗೆ 1987ನೇ ವರ್ಷದ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿದೆ. ಖ್ಯಾತ ವಿಮರ್ಶಕ ಮತ್ತು ಕಾದಂಬರಿಕಾರ ಡಾ॥ ಪುಣೇಕರ್ ಅವರಿಗೆ ನಮ್ಮ ಹೃತ್ಪೂರ್ವಕ ಅಭಿನಂದನೆಗಳು.

**ತ. ಸು. ಶಾಮರಾಯರ 'ಮೂರು ತಲೆಮಾರು' :** ಈ ಕೃತಿಗೆ 1987ರ ಸಾಲಿನ ಶ್ರೇಷ್ಠ ಸೃಜನಶೀಲ ಕೃತಿಗೆ ಸಲ್ಲುವ ಪ್ರಶಸ್ತಿ ದೊರಕಿದೆ. ಸುಮಾರು 280 ಪುಟಗಳ ಈ ಕೃತಿಯಲ್ಲಿ ದಿವಂಗತ ಪ್ರಾಧ್ಯಾಪಕ: ಟಿ. ಎಸ್. ವೆಂಕಣ್ಣಯ್ಯನವರು, ಅವರ ತಂದೆ ದೊಡ್ಡ ಸುಬ್ಬಣ್ಣ ಮತ್ತು ಅಜ್ಜ ವೆಂಕಣ್ಣಯ್ಯ. ಅಜ್ಜನ ಕಾಲದ ವಿಷಯ 'ಕೇಳಿದ್ದು'. ತಂದೆ ಮತ್ತು ಅವರ ಕಾಲದ ವಿಷಯ 'ಕಂಡದ್ದು'. ಅಣ್ಣ ಪ್ರಾಧ್ಯಾಪಕ ವೆಂಕಣ್ಣಯ್ಯನವರು ಮತ್ತು ಸಮಕಾಲೀನ ವಿಷಯ 'ಅನುಭವಿಸಿದ್ದು'—ಹೀಗೆ ಕಂಡದ್ದು-ಕೇಳಿದ್ದು ಅನುಭವಿಸಿದ್ದು ಇವುಗಳ ತ್ರಿವೇಣೀ

ಸಾಹಿತ್ಯ ಸಂಗಮವೆ 'ಮೂರು ತಲೆಮಾರು' ಎಂಬ ಸಾರ್ಥಕ ಶೀರ್ಷಿಕೆಯ ಜೀವನ ಚರಿತ್ರಾತ್ಮಕ ಕಾದಂಬರಿ. ಇದು ಕೇವಲ ವ್ಯಕ್ತಿಗಳ ಕಥೆ ಮಾತ್ರವಾಗಿರದೆ, ಜೀವನ ಮೌಲ್ಯಗಳ ಗಂಗಾಸ್ರೋತವೂ ಆಗಿರುವುದು ಕೃತಿಯ ವಿಶೇಷ ಗುಣ. ವಾಸ್ತವ-ಕಲ್ಪನೆಗಳ ಹದವಾದ ಮಿಶ್ರಣ ಕೃತಿಗೆ ಸುಮಾಚನೀಯ ಚಿರಕಾಲಿಕ ಮೌಲ್ಯದ ಸೌಭಾಗ್ಯವನ್ನು ನೀಡಿದೆ. ಇಂಥ ಶ್ರೇಷ್ಠ ಗುಣವುಳ್ಳದ ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರಕಿದ್ದು ಶಾಮರಾಯರ ಮನೆತನಕ್ಕೇ ಸಂದ ಗೌರವ. ಈ ಗೌರವವನ್ನು ಸಂಪಾದಿಸಿ ಕೊಟ್ಟ ಶ್ರೀಯುತರು ಅಭಿನಂದನೀಯರು.

**ಡಾ॥ ಎಂ. ಎಂ. ಕಲಬುರ್ಗಿ :** ಐವತ್ತೊಂದನೆಯ ವರ್ಷ ವಯಸ್ಸಿಗೆ ಅಡಿಯಿಟ್ಟಿರುವ ಮಲ್ಲಪ್ಪ ಮಡಿವಾಳಪ್ಪ ಕಲಬುರ್ಗಿಯವರು (ಜ. 28-11-1938) ಇಂದಿನ ಪೀಳಿಗೆಯ ಕನ್ನಡ ಸಂಶೋಧನ ಪ್ರಪಂಚದಲ್ಲಿ ಹೆಸರು ಮಾಡಿರುವ ಪ್ರಮುಖರಲ್ಲಿ ಒಬ್ಬರು. ಈಗಾಗಲೇ 30 ಗ್ರಂಥಗಳನ್ನು ಪ್ರಕಟಿಸಿದ್ದಾರೆ; ಸುಮಾರು 200ಕ್ಕೂ ಮಿಕ್ಕು ಸಂಶೋಧನ ಲೇಖನಗಳನ್ನು ಬರೆದಿದ್ದಾರೆ. 'ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ' (1973) ಇವರ ಪಿ.ಎಚ್.ಡಿ. ಪ್ರಬಂಧ. ಇವರ ಸಾಧನೆ, ಸಿದ್ಧಿಗಳು ಅಪಾರ. ಸಾರಾಂಶವಾಗಿ ಹೇಳುವುದಾದರೆ, ಇವರ ಸಂಶೋಧನೆಯ ವ್ಯಾಪ್ತಿ ವ್ಯಾಕರಣ, ಛಂದಸ್ಸು, ಹಳಗನ್ನಡ, ನಡುಗನ್ನಡ, ಶಾಸನ, ಜಾನಪದ, ಸಂಸ್ಕೃತಿ, ಇತಿಹಾಸ, ಗ್ರಂಥಸಂಪಾದನೆ ಮೊದಲಾದ ಹತ್ತಾರು ಕ್ಷೇತ್ರಗಳಲ್ಲಿ ಸು. 1968ರಲ್ಲಿ ಬೇರುಬಿಟ್ಟು ಮೊಳೆತು ಚಿಗುತು ಹಸಿರಾಗಿ ಸತ್ಫಲಗುಚ್ಛಗಳನ್ನು ನೀಡಿದೆ. ಇವರ ಈ ಫಲಗಳನ್ನೆಲ್ಲ ಒಳಗೊಂಡ ತೋರಗೊಂಚಲು 'ಮಾರ್ಗ' ಸಂಪುಟ; ಇವರ 51ನೇ ಹುಟ್ಟುಹಬ್ಬದ ಸಂದರ್ಭದಲ್ಲಿ ಪ್ರಕಟವಾಗಿದೆ. ಡಾ॥ ಕಲಬುರ್ಗಿಯವರು ಶ್ರೇಷ್ಠ ಸಂಶೋಧಕರಾಗಿ ನಡೆದು ಬಂದ ಮಾರ್ಗವನ್ನು ಪ್ರತಿನಿಧಿಸುತ್ತಿದೆ 'ಮಾರ್ಗ' ಸಂಪುಟ. ಈ ಮಾರ್ಗದಲ್ಲಿ ಶ್ರೀಯುತರು ನೂರುಕಾಲ ಯಶಸ್ವೀ ಅನ್ವೇಷಣ ಪ್ರಯಾಣವನ್ನು ಸಾಗಿಸಿ ಕೃತಾರ್ಥರಾಗಲಿ ಎಂದು ಶುಭಾಶಯ ಪೂರ್ವಕ ಹಾರೈಸುತ್ತೇವೆ.

o o o

## ಕುಮಾರವ್ಯಾಸನ ಮೇಲೆ 'ಹೊಸ ಬೆಳಕು'

ತರೀಕೆರೆಯ ಅಂಚೆವಾರ್ತೆ ಎಂಬ ಸಣ್ಣ ಪತ್ರಿಕೆಯ ಸಂಪಾದಕರಾದ ಶ್ರೀ ಎ. ವಿ. ನಾಗಭೂಷಣ ಅವರು ಉತ್ಸಾಹಶಾಲಿ ಪತ್ರಕರ್ತರು, ಸಾಹಿತ್ಯಪ್ರೇಮಿಗಳು, ಸ್ವಸ್ಥಳದ ವಿದ್ಯಮಾನಗಳ ಅಭಿಮಾನಿಗಳು. ಇವರಿಗೆ ತರೀಕೆರೆ ತಾಲೂಕು ಲಿಂಗದಹಳ್ಳಿ ಗ್ರಾಮದ ಶ್ರೀ ಬಿ. ಎಸ್. ಸೂರ್ಯನಾರಣಪ್ಪನವರು ಬರೆದಿಟ್ಟಿರುವ ಒಂದು ನೋಟ್ ಬುಕ್ ಹಸ್ತಗತವಾಯಿತು. ಕುಮಾರವ್ಯಾಸನ ವಿಷಯವಾಗಿ ತಮ್ಮ ಮುತ್ತಜ್ಜ

ಕೊಡಿಗೆಪ್ಪ ಎಂಬವರು ಬರೆದಿಟ್ಟಿದ್ದ ಕವಿಯ ವಂಶಾವಳಿ ಮತ್ತು ಆತನ ಸಂಬಂಧದ ಇತರ ವಿವರಗಳ ದಾಖಲೆಗಳು ಸೂರ್ಯನಾರಣಪ್ಪನವರಿಗೆ ದೊರೆತವಂತೆ. ಅವನ್ನು ಆಧರಿಸಿ ಸೂರ್ಯನಾರಣಪ್ಪನವರು ತಮ್ಮ ನೋಟ್ ಬುಕ್ಕಿನಲ್ಲಿ ಆ ವಿವರಗಳನ್ನೆಲ್ಲ ಕ್ರೋಡೀಕರಿಸಿ ತಮ್ಮ ಭಾಷೆಯಲ್ಲಿ ನಿರೂಪಣೆ ಮಾಡಿದ್ದಾರೆ. ಇವರ ಬರಹ ಬೀರಬಹುದಾದ 'ಹೊಸ ಬೆಳಕಿನ' ಪ್ರಧಾನ ಕಿರಣಗಳು ಹೀಗಿವೆ:

(1) **ವಂಶಾವಳಿ:** ಯಗಟಿ ಪ್ರಾಂತಕ್ಕೆ ಗದುಗು ಪ್ರಾಂತದಿಂದ ಬಂದರೆಂದು ಹೇಳಲಾಗಿರುವ ನಾರಣಪ್ಪನ ವಂಶಜರ ಯಾದಿಯಲ್ಲಿ 30 ಹೆಸರುಗಳಿವೆ. ಇವುಗಳ ಪೈಕಿ ಭದ್ರಾವತಿ ನಿವಾಸಿಯಾದ, ಮೇಲೆ ಉಲ್ಲೇಖಿಸಿದ ಸೂರ್ಯನಾರಣಪ್ಪ 28ನೆಯವರು. ನಾರಣಪ್ಪನೇ ಮೂಲಪುರುಷ. ವಂಶಾವಳಿಯಲ್ಲಿ ನಾರಣಪ್ಪನ ಹೆಸರು 27ನೆಯದಾಗಿ ಎರಡು ಸಲ ಮಾತ್ರ ಪುನರಾವೃತ್ತಿಯಾಗಿದೆ. ತಿರುಮಲಯ್ಯ 5 ಸಲ, ತಿಮ್ಮರಸಯ್ಯ ಒಂದು ಸಲ; ವೆಂಕಪ್ಪ 2 ಸಲ; ತಿಮ್ಮಪ್ಪಯ್ಯ 2 ಸಲ; ವೆಂಕಟೇಶಯ್ಯ, ವೆಂಕಟಪ್ಪ, ಇತ್ಯಾದಿ.

(2) **ಗದುಗಿನ ನಾರಣಪ್ಪನ (ಕುಮಾರವ್ಯಾಸ) ಪೂರ್ವಿಕರ ವೃತ್ತಾಂತ:** ಗದುಗಿನ ವೀರನಾರಾಯಣ ಸ್ವಾಮಿಯ ಮೂರ್ತಿಯನ್ನು ಸ್ಥಾಪಿಸಿ, ದೇವಾಲಯವನ್ನು ಸ್ಥಾಪಿಸಿದವರು ಹೊಯ್ಸಳ ಕರ್ಣಾಟಕ ಪಂಗಡದ ಸ್ಮಾರ್ತರಾದ, ನಾರಣಪ್ಪನ ಪೂರ್ವಜರು; ಅರ್ಚಕರು ಮಾತ್ರ ಮಾಧ್ವರು; ನಾರಣಪ್ಪನ ಪೂರ್ವಜರಿಗೆ ಮೊದಲ ತೀರ್ಥ ಪ್ರಸಾದಗಳ ನೀಡಿಕೆ ಅನೂಚಾನವಾಗಿ ನಡೆದು ಬಂದಿತ್ತು: ಅವರನ್ನು ಮುದ್ರಾಧಾರಣೆ ಮಾಡಿಸಿಕೊಳ್ಳಲು ಅರ್ಚಕರು ಬಲಾತ್ಕರಿಸಿದರು: ನಾರಣಪ್ಪನ ಪೂರ್ವಿಕರು ಒಪ್ಪದೆ, ಏಕಾದಶೀ ವ್ರತಾಚರಣೆ ಮುಂತಾದ ಕೆಲವು ಮಾಧ್ವ ಆಚರಣೆಗಳನ್ನು ಮಾತ್ರ ಸ್ವೀಕರಿಸಿ. ಭಾಗವತ ಸಂಪ್ರದಾಯದ ಸ್ಮಾರ್ತರಾದರು. ಹೀಗೆ, ನಾರಣಪ್ಪ ಸ್ಮಾರ್ತ ಭಾಗವತ ಸಂಪ್ರದಾಯದವನಾದ.

(3) **ನಾರಣಪ್ಪ ಯಗಟಿಗೆ ಬಂದದ್ದು:** ತನಗೂ ತನ್ನ ಕಡೆಯವರಿಗೂ ಪ್ರಥಮತಃ ಸಲ್ಲಬೇಕಾದ ತೀರ್ಥಪ್ರಸಾದದ ಹಕ್ಕನ್ನು ತಪ್ಪಿಸಿದಾಗ ನಾರಣಪ್ಪ ಕೋಪಗೊಂಡು ತನ್ನ ಪೂರ್ವಜರು ಸ್ಥಾಪಿಸಿದ್ದ ವೀರನಾರಾಯಣ ಮೂರ್ತಿಯನ್ನು ತನ್ನ ಸ್ನೇಹಿತರ ನೆರವಿನಿಂದ ಕೀಳಿಸಿ, 15 ಸಂಸಾರಗಳ ಸಮೇತ ವಿಗ್ರಹವನ್ನು ಎತ್ತಿನ ಗಾಡಿಯಲ್ಲಿಟ್ಟು ಪೂರ್ವಾಭಿಮುಖವಾಗಿ ಪ್ರಯಾಣ ಮಾಡಿದನು. ಹಲವು ದಿನ ಪಯಣಿಸಿ ಬೀರೂರು ಮಾರ್ಗವಾಗಿ ಯಗಟಿ ಗ್ರಾಮಕ್ಕೆ ಬಂದಾಗ ಗಾಡಿಯ ಅಚ್ಚು ಮುರಿಯಿತು. ಎಲ್ಲಿ ಗಾಡಿ ಮುಂದಕ್ಕೆ ಹೋಗಲಾಗದೆ ನಿಂತುಬಿಡುತ್ತದೋ ಅಲ್ಲಿ ವಿಗ್ರಹವನ್ನು ಸ್ಥಾಪಿಸುವುದೆಂದು ನಾರಣಪ್ಪ ಮೊದಲೇ ಸ್ನೇಹಿತರಿಗೆ ತಿಳಿಸಿದ್ದನು. ಅದರಂತೆ ನಾರಣಪ್ಪ ವೀರನಾರಾಯಣಸ್ವಾಮಿಯನ್ನು ಯಗಟಿಯಲ್ಲಿ ಪ್ರತಿಷ್ಠಾಪಿಸಿ

ದನು. ಯುಗಟಿಗೆ ಕ್ರಿ. ಶ. ಸು. 1116ರಲ್ಲಿ ಬಂದಿರಬಹುದೆಂದು ಊಹೆ. (ನಾರಣಪ್ಪ ಯುಗಟಿಗೇ ಏಕೆ ಬಂದ ಎನ್ನುವುದಕ್ಕೆ ಕಾರಣ ಕೊಡುವ ಕಟ್ಟುಕಥೆ ಇರಬಹುದು ಇದು. ವೀರನಾರಾಯಣ ವಿಗ್ರಹ* ಇತ್ತು; ನಾರಣಪ್ಪನ ವಂಶದವರೂ ಕೆಲವರು ವಲಸೆ ಬಂದಿದ್ದಿರಬಹುದು. ಕತೆ ಬೆಳೆಯಲು ಇಷ್ಟು ಸಾಕಾಯಿತು.)

(4) **ಕುಮಾರವ್ಯಾಸ ಭಾರತದ ರಚನಾಕಾಲ :** ನಾರಣಪ್ಪ ಯುಗಟಿಗೆ ಬಂದ ಮೇಲೆ, ಸು. ಕ್ರಿ.ಶ. 1145ರಲ್ಲಿ ಭಾರತವನ್ನು ಬರೆದಿರಬಹುದು. (ಈ ಹೇಳಿಕೆಗೆ ಆಧಾರ ಸೂರ್ಯನಾರಣಪ್ಪನವರ ತಂದೆ ನಾರಣಪ್ಪನ ಹಿರಿಯ ಅಣ್ಣ ಕೊಡಿಗೆಪ್ಪನ ಹೇಳಿಕೆ, ಇವರಲ್ಲೂ ಒಂದು ವಂಶಾವಳಿ ಇತ್ತು. ತಮ್ಮ ವಂಶ 800 ವರ್ಷ ಪೂರ್ವದ್ದು ಎಂದು.) ಅದರಲ್ಲಿ ಉಲ್ಲೇಖವಿದೆಯಂತೆ.

(5) **ನಾರಣಪ್ಪನ ಗೋತ್ರ ಸೂತ್ರಗಳು :** ಋಕ್‌ಶಾಖೆಯ ಭಾರದ್ವಾಜ ಗೋತ್ರ, ಆಶ್ವಲಾಯನ ಸೂತ್ರ.

ಶ್ರೀ ಎ. ವಿ. ನಾಗಭೂಷಣ ಅವರು ಮೇಲಿನ ವಿಚಾರಗಳನ್ನು ಪ್ರಚುರಪಡಿಸುವ ಉದ್ದೇಶದಿಂದ 27-11-1988ರಂದು ಯುಗಟಿಯಲ್ಲಿ ಒಂದು ಸಮ್ಮೇಳನವನ್ನು ಯಶಸ್ವಿಯಾಗಿ ನಡಸಿದರು. ಸ್ಥಳಾಭಿಮಾನ, ವಂಶಾಭಿಮಾನ, ಮೆಚ್ಚತಕ್ಕದ್ದೆ. ಶ್ರೀ ಸೂರ್ಯನಾರಣಪ್ಪನವರ ನೋಟ್‌ಬುಕ್ಕಿನಲ್ಲಿ ತಿಳಿಸಿರುವ ಮೇಲ್ಕಂಡ ಅಂಶಗಳನ್ನು ನೆರೆದಿದ್ದ ಶ್ರೋತೃಗಳ ಮುಂದಿಟ್ಟು, ತಮ್ಮ ಪತ್ರಿಕೆಯಲ್ಲೂ ಪ್ರಚುರಪಡಿಸಿದರು. ಈ ವಿಚಾರದಲ್ಲಿ ಸಂಶೋಧಕರ, ವಿದ್ವಾಂಸರ ಪ್ರತಿಕ್ರಿಯೆಯನ್ನು ತಿಳಿಯುವ ಸಲುವಾಗಿ ನೋಟ್‌ಬುಕ್ಕಿನ ಪ್ರಸಕ್ತ ಭಾಗಗಳ XEROX ಪ್ರತಿಯನ್ನೂ, ಯುಗಟಿ ವೀರನಾರಾಯಣಸ್ವಾಮಿಯ ಛಾಯಾಚಿತ್ರಪ್ರತಿಯನ್ನೂ ನಮಗೆ ಕಳಿಸಿಕೊಟ್ಟರು. ಅವರು ಒದಗಿಸಿದ ದಾಖಲೆಯ ಸಾರಾಂಶವನ್ನು ಮೇಲೆ ಸಂಗ್ರಹಿಸಿ ಕೊಟ್ಟಿದ್ದೇವೆ. ಸತ್ಯಾಂಶ ಏನಾದರೂ ಇರಲಿ, ಈ ವಿಷಯದಲ್ಲಿ ಆಸಕ್ತಿ ವಹಿಸಿ, ತಮಗೆ ತಿಳಿದುಬಂದ ವಿಚಾರವನ್ನು ಪ್ರಚುರಪಡಿಸಿದ್ದಕ್ಕಾಗಿ ಶ್ರೀಯುತರು ಅಭಿನಂದನಾರ್ಹರು.

## ನಮ್ಮ ಪ್ರತಿಕ್ರಿಯೆ

ಕೋಳಿವಾಡ ಗ್ರಾಮದ ಶಾನುಭೋಗರು ಆರ್. ಎಸ್. ಪಂಚಮುಖಿ ಅವರಿಗೆ ಒದಗಿಸಿದ ಕಾಗದ ಪತ್ರಗಳು, ಮೇವುಂಡಿ ಗೌಡಮನೆತನದವರು ಒದಗಿಸಿದ ಕಾಗದ ಪತ್ರಗಳು, ಹುಯಿಲಗೋಳ ನಾರಾಯಣರಾಯರ ಬಳಿ ಇದ್ದ ವಂಶಾವಳಿ—ಇವುಗಳ

---

* ವೀರನಾರಾಯಣ ಎಂಬ ದೇವತಾನಾಮ ಬಹಳ ಪ್ರಾಚೀನವಾದದ್ದು. ಇದು ನೃಪತುಂಗನ ಬಿರುದುಗಳಲ್ಲಿ ಒಂದು. ಅವನ ತಂದೆ 3ನೇ ಗೋವಿಂದನಿಗೆ ಕೀರ್ತಿನಾರಾಯಣ ಎಂಬ ಬಿರುದಿತ್ತು. ಕೀರ್ತಿನಾರಾಯಣ ಮೂರ್ತಿಯೂ ಉಂಟು.

ಆಧಾರದ ಮೇಲೆ "ಕವಿಯ ಹೆಸರು ವೀರನಾರಾಯಣ ಅಥವಾ ನಾರಣಪ್ಪನೆಂದೂ, ಅವನು ಕೋಳಿವಾಡ ಗ್ರಾಮದ ನಿವಾಸಿಯೆಂದೂ ಶಾನುಭೋಗ ವೃತ್ತಿಯವನೆಂದೂ ಸ್ಥೂಲವಾಗಿ ಊಹಿಸಬಹುದು." ಗದುಗಿನ ಪ್ರಾಂತದಿಂದ ಶಿವಮೊಗ್ಗ ಜಿಲ್ಲೆಯ ಪ್ರಾಂತಕ್ಕೆ ನಾರಣಪ್ಪ ಬಂದನೆಂಬುದಕ್ಕೆ ಗದುಗು ಪ್ರಾಂತದಲ್ಲಿ ಯಾವ ಪ್ರತೀತಿ ಯಾಗಲಿ ದಾಖಲೆಯಾಗಲಿ ಇಲ್ಲ. ನಾರಣಪ್ಪನ ಪೂರ್ವಜರು ಪರಂಪರೆಯಿಂದ ವಿಜಯನಗರದ ರಾಜಾಸ್ಥಾನದಲ್ಲಿ ಗಜಸೇನಾಧಿಪತ್ಯ ಪದವಿಯನ್ನು ಅನುಭವಿಸುತ್ತ ಬಂದಿರಬಹುದೆಂಬುದಕ್ಕೆ ಕೋಳಿವಾಡದ 1485ರ ಶಾಸನಾಧಾರವಿದೆ. ಈ ಶಾಸನ ದಲ್ಲಿ ಆನೆ ಸೂರಪ್ಪಯ್ಯನ ಉಲ್ಲೇಖವಿದೆ. (ಯಗಟಿ ವಂಶಾವಳಿಯಲ್ಲಿ 'ಯಾನೆ ತಿಮ್ಮಪ್ಪಯ್ಯ' ಮೂರನೆಯಾತ 'ಆನೆ ತಿಮ್ಮಪ್ಪಯ್ಯ' ಇರಬಹುದ ?). ಕನ್ನಡ ಭಾರತದಲ್ಲಿ ಭಗದತ್ತನ ಸುಪ್ರತೀಕ ಗಜದ ವರ್ಣನೆಯನ್ನು ಪರಿಶೀಲಿಸಿದರೆ, ನಾರಣಪ್ಪ ವಿಜಯನಗರದಲ್ಲಿ ಕೆಲಕಾಲ ಇದ್ದನೆಂದು ಊಹಿಸಬಹುದು. ನಾರಣಪ್ಪ ಲಕ್ಷ್ಮಣದೇವ ಅಥವಾ ಲಕ್ಕರಸನ ಮಗ ಎನ್ನುವುದಕ್ಕೆ ಹೆಚ್ಚಿನ ಪುರಾವೆ ಇದೆ. ಹುಯಿಲಗೋಳ ನಾರಾಯಣರಾಯರ ವಂಶಾವಳಿಯಲ್ಲಿ ನಾರಣಪ್ಪ ಲಕ್ಕರಸನ ಮಗ ಎಂದಿದೆಯಂತೆ. ಒಂದನೆಯ ದೇವರಾಯನ ಕಾಲದಲ್ಲಿ ಲಕ್ಷ್ಮಣದೇವ (1406–1422) ಮಂತ್ರಿಯಾಗಿದ್ದನೆಂದು ಇತಿಹಾಸ ತಿಳಿಸುತ್ತದೆ. ದೇವರಾಯನ ಮರಣಾನಂತರ ಕ್ರಿ.ಶ. ಸು. 1424 ರಲ್ಲಿ ತನ್ನ ಉಂಬಳಿ ಗ್ರಾಮವಾದ ಕೋಳಿವಾಡಕ್ಕೆ ಹಿಂದಿರುಗಿದನು. ಇವನ ಐವರು ಮಕ್ಕಳಲ್ಲಿ ಹಿರಿಯವನಾದವನು ಗದುಗಿನ ವೀರ-ನಾರಾಯಣನ ಪ್ರಸಾದದಿಂದ ಜನಿಸಿದವನಾದ್ದರಿಂದ ಅವನ ಹೆಸರೂ ವೀರ-ನಾರಾಯಣ. ಇವನು ತನ್ನ ಪ್ರಾಯದಲ್ಲಿ (ಎಂದರೆ 1425–1455ರ ಅವಧಿಯಲ್ಲಿ) ಗದುಗಿನ ವೀರನಾರಾಯಣಸ್ವಾಮಿಯ ದೇವಸ್ಥಾನದಲ್ಲಿಯೇ ಬರೆದನೆಂದು ಊಹಿಸ ಲಾಗಿದೆ. ಗದುಗಿನ ವೀರನಾರಾಯಣಸ್ವಾಮಿ ದೇವಸ್ಥಾನದ ಒಂದು ಕಂಬವನ್ನು ಒರಗಿ ಕುಳಿತು ನಾರಣಪ್ಪ ಕೃತಿರಚನೆ ಮಾಡಿದನೆಂದು ಈಗಲೂ ಆ ಕಂಬವನ್ನು ದೇವಾಲಯದವರು ತೋರಿಸುತ್ತಾರೆ.

ಸದ್ಯದ ಮಟ್ಟಿಗೆ, ಕುಮಾರವ್ಯಾಸ ಗದುಗಿನವನು, ವಿಜಯನಗರ ರಾಜಾ-ಸ್ಥಾನದ ನೋಟಮಾಟಗಳನ್ನು ಬಲ್ಲವನಾಗಿದ್ದನು, ಗದುಗಿನಲ್ಲಿಯೇ ಕೃತಿರಚನೆ ಮಾಡಿದನು. 1430ರ ಆಚೆ ಈಚಿನ ಗಡುವುಗಳ ನಡುವೆ ಬಾಳಿದನು ಎಂಬ ಕಡೆಗೆ ವಿದ್ವಾಂಸರ ಅಭಿಮತವಿದೆ.

ಈ ಹಿನ್ನೆಲೆಯ ಬೆಳಕಿನಲ್ಲಿ ಕುಮಾರವ್ಯಾಸ ಯಗಟಿಗೆ ಬಂದು ಅಲ್ಲಿ ಕೃತಿರಚನೆ ಮಾಡಿದನು ಎಂಬ 'ಹೊಸ ಬೆಳಕು' ಬಲುಮಟ್ಟಿಗೆ ಮಸುಕಾಗುತ್ತದೆ. ಅಲ್ಲದೆ, ಸೂರ್ಯನಾರಾಯಣಪ್ಪನವರ ನೋಟ್‌ಬುಕ್ಕು ತೀರ ಇತ್ತೀಚಿನದು. ಇದರಲ್ಲಿಯ ಹೇಳಿಕೆಗಳನ್ನು ನಂಬುವುದು ಕಷ್ಟ ಎಂಬ ಆಕ್ಷೇಪಕ್ಕೆ ಅವಕಾಶವಿದೆ.

ಕೋಳಿವಾಡ ಮನೆತನದವರು ಮುಂತಾದವರ ಕಾಗದಪತ್ರಗಳೂ ಎಷ್ಟು ಹಳೆಯವು ಎಂಬುದೂ ತಿಳಿಯದು. ಅವುಗಳ ಬಗ್ಗೆಯೂ ಸಂಶಯಕ್ಕೆ ಅವಕಾಶವಿದೆ. ಆದರೆ ಕೋಳಿವಾಡದ ಶಾಸನ ವಿಶ್ವಸನೀಯ ಆಧಾರ.

ಬಿ.ಎಂ.ಶ್ರೀ. ಅವರು ಹೇಳುವಂತೆ—

**"ಕೊನೆಗೆ ನಿಲ್ಲುವುದು ಅಭಿಮಾನವಲ್ಲ, ಸತ್ಯ."**

**—ಎಂ. ವಿ. ಸೀ.**

[ಈ ವಿಷಯವಾಗಿ ಓದುಗರಿಂದ 'ಪ್ರತಿಕ್ರಿಯೆ'ಯನ್ನು ಸ್ವಾಗತಿಸುತ್ತೇವೆ.—ಸಂ.]

## ಸಾಹಿತ್ಯ ಅಕಾಡೆಮಿಯ ಗೌರವಾನ್ವಿತ ಸದಸ್ಯ ಪ್ರೊ॥ ವಿ. ಕೃ. ಗೋಕಾಕ್

ಕೇಂದ್ರ ಸಾಹಿತ್ಯ ಅಕಾಡೆಮಿಯ 'ಫೆಲೋ' (ಗೌರವಾನ್ವಿತ ಸದಸ್ಯ) ಆಗುವುದು ಎಂದರೆ ಭಾರತೀಯ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಅತ್ಯುನ್ನತ ಪದವಿ ಪಡೆದಂತೆ. ಭಾರತಕ್ಕೆಲ್ಲ ಒಟ್ಟು ಸುಮಾರು ಇಪ್ಪತ್ತು ಜನ ಮಾತ್ರ ಅಕಾಡೆಮಿಯ ಗೌರವ ಸದಸ್ಯರಾಗಿರಲು ಸಾಧ್ಯ, ಕನ್ನಡ ಸಾಹಿತ್ಯದ ಪ್ರತಿನಿಧಿಗಳಾಗಿ ದ. ರಾ. ಬೇಂದ್ರೆ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಕುವೆಂಪು, ಶಿವರಾಮ ಕಾರಂತ—ಈಗಾಗಲೇ ಆಯ್ಕೆಯಾಗಿದ್ದವರು. ಈಗ ಈ ಪ್ರತಿಷ್ಠಿತ ಪದವಿ ಪ್ರೊ॥ ವಿ. ಕೃ. ಗೋಕಾಕ್ ಅವರಿಗೆ ಸಂದಿದೆ. ನಮ್ಮ ಸಂಸ್ಥೆಯ ಗೌರವ ಸದಸ್ಯರೂ ಆದ ಈ ಹಿರಿಯ ಸಾಹಿತಿಗೆ ಈ ಗೌರವ ಸಂದಿರುವುದು ಅಭಿಮಾನಾಸ್ಪದವಾದ ಸಂಗತಿ. ಸನ್ಮಾನ್ಯ ಗೋಕಾಕ್ ಅವರಿಗೆ ನಮ್ಮ ಗೌರವಪೂರ್ವಕ ಅಭಿನಂದನೆಗಳು.

## ಕನ್ನಡ ಅಧ್ಯಯನ ಸಂಸ್ಥೆಯ ವಜ್ರಮಹೋತ್ಸವ

ಆಚಾರ್ಯ ಬಿ.ಎಂ.ಶ್ರೀ. ಅವರು ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಆಗಿದ್ದಾಗ ಮಹಾರಾಜರವರ ಕಾಲೇಜಿನಲ್ಲಿ ಕನ್ನಡ ಸ್ನಾತಕೋತ್ತರ ಪದವಿ (ಎಂ.ಎ.) ಶಿಕ್ಷಣ ವಿಭಾಗವನ್ನು ತೆರೆದರು. ಈ ಕನ್ನಡ ವಿಭಾಗ ಅಧ್ಯಯನ ವಿಷಯಗಳ ಶಾಖೋಪಶಾಖೆಗಳನ್ನು ಒಳಗೊಂಡ ಒಂದು ಬೃಹತ್ ಅಧ್ಯಯನ ಸಂಸ್ಥೆಯಾಗಿ ಬೆಳೆಯುತ್ತದೆ ಎಂದು ಬಹುಶಃ ಅವರು ಕನಸು ಕಂಡಿರಲಾರರು. ಮಹಾರಾಜರವರ ಕಾಲೇಜಿನ ಪ್ರಾಧ್ಯಾಪಕ ಪರಂಪರೆಯಲ್ಲಿ ಟಿ. ಎಸ್. ವೆಂಕಣ್ಣಯ್ಯ, ಎ. ಆರ್. ಕೃಷ್ಣಶಾಸ್ತ್ರೀ, ಕೆ. ವಿ. ಪುಟ್ಟಪ್ಪ, ತೀ. ನಂ. ಶ್ರೀಕಂಠಯ್ಯ, ಡಿ. ಎಲ್. ನರಸಿಂಹಾಚಾರ್ ಕನ್ನಡ ಪೀಠವನ್ನು ಅಲಂಕರಿಸಿದ್ದಾರೆ. ಕನ್ನಡ ವಿಭಾಗ ಮಾನಸ ಗಂಗೋತ್ರಿಗೆ ವರ್ಗವಾದಾಗ ತೀ.ನಂ.ಶ್ರೀ. ನೂತನ ವಿಭಾಗದ ನೇತಾರರಾದರು. ಅವರ ತರುವಾಯ ಈ ವಿಭಾಗ ಕನ್ನಡ ಅಧ್ಯಯನ ಸಂಸ್ಥೆಯಾಗಿ ಮಾರ್ಪಟ್ಟು ದೇ. ಜವರೇಗೌಡರು ಅದರ ನಿರ್ದೇಶಕರು. ಅವರು ಉಪಕುಲಪತಿಗಳಾದ ಮೇಲೆ ಕ್ರಮವಾಗಿ

ಹಾ. ಮಾ. ನಾಯಕ, ಎಚ್. ತಿಪ್ಪೇರುದ್ರಸ್ವಾಮಿ ನಿರ್ದೇಶಕರಾದರು. ಈಗ ಜಾನಪದ ಕ್ಷೇತ್ರದಲ್ಲಿ ದೊಡ್ಡ ಹೆಸರಾದ ಜಿ. ಶಂ. ಪರಮಶಿವಯ್ಯನವರು ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದಾರೆ. ಆಧುನಿಕ ಕನ್ನಡ ಭಾಷೆ ಮತ್ತು ಸಾಹಿತ್ಯಗಳ ಬೆಳವಣಿಗೆಯಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ಪಾತ್ರ ಬಹುಮುಖವಾದದ್ದು, ವ್ಯಾಪಕವಾದದ್ದು ; ಮೇಲಾಗಿ ಐತಿಹಾಸಿಕ ಮಹತ್ವ ಉಳ್ಳದ್ದು. ಅರ್ಥಪೂರ್ಣ ಅರುವತ್ತು ವರ್ಷ ತುಂಬಿದ ಅಧ್ಯಯನ ಸಂಸ್ಥೆ ಈಗ ವಜ್ರಮಹೋತ್ಸವವನ್ನು ಆಚರಿಸುತ್ತಿದೆ. ಈ ಶುಭಸಂದರ್ಭದಲ್ಲಿ ಸಂಸ್ಥೆಯನ್ನು ಕಟ್ಟಿ ಬೆಳಸಿದ ಎಲ್ಲರನ್ನೂ ಹೆಮ್ಮೆಯಿಂದ ನೆನೆಯುತ್ತ, ಉತ್ತರೋತ್ತರ ಅಭಿವೃದ್ಧಿಗಾಗಿ ನಮ್ಮೆಯ ಶುಭಾಶಯಗಳನ್ನು ಸಂಸ್ಥೆಗೆ ಕೋರುವುದು ನಮ್ಮ ಸಂತೋಷದ ಕರ್ತವ್ಯವಾಗಿದೆ.

## ಕನಕದಾಸರ ಐನೂರರ ಜಯಂತಿ

ದಾಸಸಾಹಿತ್ಯದಲ್ಲಿ ಪುರಂದರದಾಸರನ್ನು ಬಿಟ್ಟರೆ ವ್ಯಾಪಕವಾದ ಜನಪ್ರಿಯತೆಗೂ ಮನ್ನಣೆಗೂ ಪಾತ್ರರಾದವರು ಕನಕದಾಸರು. ಕನಕದಾಸರು ಕೀರ್ತನೆಗಳನ್ನು ಮಾತ್ರವಲ್ಲದೆ, ನಳಚರಿತ್ರೆ, ಮೋಹನ ತರಂಗಿಣಿ, ರಾಮಧಾನ್ಯ ಚರಿತ್ರೆ, ಹರಿಭಕ್ತಿ ಸಾರ ಎಂಬ ಮಹತ್ವಪೂರ್ಣ ಕಾವ್ಯಗಳನ್ನೂ ರಚಿಸಿ ಕನ್ನಡ ಕಾವ್ಯಭಂಡಾರವನ್ನು ಸಮೃದ್ಧಗೊಳಿಸಿದ್ದಾರೆ. ದಾಸಪರಂಪರೆಯಲ್ಲಿ ಏಕೈಕ ಶ್ರೇಷ್ಠ ಕವಿಯೂ ಆದ ಕನಕ ದಾಸರ 500ನೆಯ ಜಯಂತಿಯನ್ನು ನಾಡಿನ ಅನೇಕ ಸಂಘ ಸಂಸ್ಥೆಗಳೂ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವೂ ಆಚರಿಸಿ, ಉತ್ಸವದ ನೆನಪಿಗಾಗಿ ಕನಕ ಕೃತಿಗಳ ಸಮಗ್ರ ಸಂಪುಟವನ್ನು ಪ್ರಕಟಿಸಿರುವುದುಶ್ಲಾಘ್ಯವಾದದ್ದು.

## ಕನ್ನಡ ಸಾಹಿತ್ಯ ಪರಿಷತ್ತಿನ ನೂತನ ಅಧ್ಯಕ್ಷರು

ಕನ್ನಡ ಸಾಹಿತ್ಯ ಪರಿಷತ್ತು ಒಂದು ವರ್ಷಕ್ಕೂ ಮಿಕ್ಕು ಸರ್ಕಾರದ ಆಡಳಿತಾಧಿಕಾರಿಗಳ ಅಧೀನಕ್ಕೆ ಒಳಪಟ್ಟಿತ್ತು. ಈಗ ಪರಿಷ್ಕೃತ ನಿಯಮಾವಳಿಗೆ ಅನುಗುಣವಾಗಿ ಪ್ರೊ॥ ಜಿ. ಎಸ್. ಸಿದ್ಧಲಿಂಗಯ್ಯನವರು ಪ್ರಚಂಡ ಬಹುಮತದಿಂದ ಆಯ್ಕೆಯಾಗಿರುವುದು ಹರ್ಷದ ಸಂಗತಿ. ಅವರು ಈಚೆಗೆ ಕವಿ ಸಾ. ಶಿ. ಮರುಳಯ್ಯನವರನ್ನೂ ಚಿ. ಶ್ರೀನಿವಾಸರಾಜು ಅವರನ್ನೂ ಕಾರ್ಯದರ್ಶಿಗಳಾಗಿ ನೇಮಕ ಮಾಡಿರುವುದು ಸ್ವಾಗತಾರ್ಹ. ಅಂತೆಯೇ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರನ್ನು ಕೋಶಾಧಿಕಾರಿಯಾಗಿ ನೇಮಕ ಮಾಡಿರುವುದೂ ಸ್ವಾಗತಾರ್ಹ. ಜಿಲ್ಲಾ ಸಮಿತಿಗಳೂ ಕಾರ್ಯಸಮಿತಿಯೂ ಹೊಸದಾಗಿ ರೂಪಗೊಂಡಿವೆ. ಹೊಸ ಪದಾಧಿಕಾರಿಗಳು ಹಾಗೂ ಕಾರ್ಯ ಸಮಿತಿ ಪರಿಷತ್ತಿಗೆ ನವಚೈತನ್ಯ ತುಂಬುವರೆಂದು ನಮ್ಮ ಹಾರೈಕೆ. ಅವರಿಗೆ ನಮ್ಮ ಹಾರ್ದಿಕ ಅಭಿನಂದನೆಗಳು.

**ಮುದ್ದಣ ಭಂಡಾರ:** ಮುದ್ದಣನ ಎಲ್ಲ ಕೃತಿಗಳನ್ನೂ ಎರಡು ಸಂಪುಟಗಳಲ್ಲಿ ಕನ್ನಡ-ಸಂಸ್ಕೃತಿ ನಿರ್ದೇಶನಾಲಯವು ಹೊರತಂದಿರುವುದು ಒಂದು ಸ್ತುತ್ಯವಾದ ಕಾರ್ಯ. ಈ ಸಂಪುಟಗಳನ್ನು ಖ್ಯಾತ ವಿದ್ವಾಂಸರೂ ಕನ್ನಡ ನಿಘಂಟುವಿನ ಪ್ರಧಾನ ಸಂಪಾದಕರೂ ಆದ ಪ್ರೊ॥ ಜಿ. ವೆಂಕಟಸುಬ್ಬಯ್ಯನವರು ಪೀಠಿಕೆ, ಗದ್ಯಾನುವಾದ ಮತ್ತು ಅರ್ಥಕೋಶಗಳೊಂದಿಗೆ ಒದಗಿಸಿಕೊಟ್ಟು ಹಳಗನ್ನಡ ಬಾರದವನಿಗೆ ಮಹೋಪಕಾರ ಮಾಡಿದ್ದಾರೆ. ರಾಮಾಶ್ವಮೇಧದ ಬಗ್ಗೆ ಒಂದು ವಿಶೇಷ ಸಂಗತಿ ಎಂದರೆ, ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗ ಒಂದು ಸಾವಿರ ರೂಪಾಯಿಗಳನ್ನು ಕೊಟ್ಟು ಕೃತಿಯ ಸ್ವಹಸ್ತಾಕ್ಷರ ಪ್ರತಿಯನ್ನು ಪಡೆದುಕೊಂಡಿತ್ತು. ಈ ಹಸ್ತಪ್ರತಿಯನ್ನು ಸಂಪಾದಕರು ದೊರಕಿಸಿಕೊಂಡು ಪ್ರಕಟಿಸಿರುವ ಬಗ್ಗೆ ವಿಶೇಷ ಅಭಿನಂದನಾರ್ಹರಾಗಿದ್ದಾರೆ. ಇಂಥ ಒಂದು ಅಮೂಲ್ಯ ಹಸ್ತಪ್ರತಿಯನ್ನು ಸಂಗ್ರಹಿಸಿದ್ದು, ಅದನ್ನು ಪ್ರಕಟನೆಗೆ ಎರವಲು ನೀಡಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗ ತಾನೇ ಮಾಡಬೇಕೆಂದಿದ್ದ ಕಾರ್ಯವನ್ನು ಕನ್ನಡ-ಸಂಸ್ಕೃತಿ ಇಲಾಖೆಗೆ ಬಿಟ್ಟುಕೊಟ್ಟದ್ದು ಪ್ರಶಂಸನೀಯ.

## ಸಂಬಂಧ

ಮುಂಬಯಿ ಕರ್ನಾಟಕ ಸಂಘದ ದ್ವೈಮಾಸಿಕ 'ಸಂಬಂಧ' ಐದು ವರ್ಷಗಳಿಂದ ಪ್ರಕಟವಾಗುತ್ತಿದ್ದು, ಇದೀಗ 6ನೆಯ ಸಂಪುಟದ ಸಂಚಿಕೆಗಳು ಕ್ರಮವಾಗಿ ನಮಗೆ ಬರತೊಡಗಿವೆ. ಮುಂಬಯಿಯಂಥ ಮಹಾನಗರದ ಬೇರೆ ಬೇರೆ ಸುದೂರ ಭಾಗಗಳಲ್ಲಿ ನೆಲಸಿರುವ ಕನ್ನಡಿಗರ ಪರಸ್ಪರ ಸೌಹಾರ್ದ ಸಂಬಂಧ ಹಾಗೂ ಕರ್ನಾಟಕದ ಒಳನಾಡು ಮತ್ತು ಮುಂಬಯಿ ಹೊರನಾಡಿನ ಕನ್ನಡಿಗರ-ಸೌಹಾರ್ದ ಸಂಬಂಧಗಳನ್ನು ಬೆಸೆಯಲು ವೈವಿಧ್ಯಮಯ ಬರಹಗಳಿಂದ ಕೂಡಿದ 'ಸಂಬಂಧ' ನೆರವಾಗಲಿ ಎಂದು ಹಾರೈಸುವೆವು: ಹಾಗೂ ಮುಂಬಯಿ ಕರ್ನಾಟಕ ಸಂಘದ ದಕ್ಷ ಕಾರ್ಯದರ್ಶಿ ಶ್ರೀ ಶ್ರೀಪತಿ ಬಲ್ಲಾಳರ ಷಷ್ಟ್ಯಬ್ದಿಪೂರ್ತಿಯ ಶುಭಸಂದರ್ಭದಲ್ಲಿ ಅವರಿಗೆ ನಮ್ಮ ಹಾರ್ದಿಕ ಶುಭಾಶಯಗಳು.

## ಕನ್ನಡ ಅಧ್ಯಯನ ಸಂಸ್ಥೆಯ ಏಳು ಗ್ರಂಥಗಳ ಬಿಡುಗಡೆ

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಪಪ್ರ-ಮಹೋತ್ಸವದ ಸಮಾರಂಭಗಳ ಅಂಗವಾಗಿ ಸಂಸ್ಥೆ ಸಿದ್ಧಪಡಿಸಿದ ಏಳು ಕನ್ನಡ ಗ್ರಂಥಗಳನ್ನು ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಎಂ. ವಿ. ಸೀತಾರಾಮಯ್ಯನವರು ಬಿಡುಗಡೆ ಮಾಡಿದರು. ವಿಶ್ವವಿದ್ಯಾನಿಲಯದ ಕುಲಪತಿಗಳಾದ (ಎಂ.ವಿ.ಸೀ. 'ಕುಲಮಾತೆ' ಎಂದು ಸಂಬೋಧಿಸಿದರು) ಡಾ॥ (ಶ್ರೀಮತಿ) ಶೆಲ್ವಿದಾಸ್ ಅವರು ಸಭಾಧ್ಯಕ್ಷತೆ ವಹಿಸಿದ್ದರು.

ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಡಾ॥ ಜಿ. ಶಂ. ಪರಮಶಿವಯ್ಯನವರು ಅತಿಥಿಗಳನ್ನು ಸಭೆಗೆ ಪರಿಚಯ ಮಾಡಿಕೊಟ್ಟರು. 1927ರಲ್ಲಿ ಪ್ರಾರಂಭವಾದ ಕನ್ನಡ ಎಂ.ಎ. ತರಗತಿ ಪ್ರಾರಂಭವಾದಾಗ ಮೊದಲ ತಂಡದ ವಿದ್ಯಾರ್ಥಿಗಳಲ್ಲಿ ಜೀವಂತರಾಗಿರುವ ಡಾ॥ ಕುವೆಂಪು, ಪ್ರೊ॥ ಕೆ. ವೆಂಕಟರಾಮಪ್ಪ ಮತ್ತು ಶ್ರೀ ಬಿ. ನಂಜುಂಡಯ್ಯನವರನ್ನು ಕರೆಸಿ ಸನ್ಮಾನ ಮಾಡಬೇಕೆಂದು ಸಂಕಲ್ಪ ಮಾಡಿರುವುದಾಗಿಯೂ, ವಯೋವೃದ್ಧರಾದ ಕೆ. ವೆಂಕಟರಾಮಪ್ಪನವರು ಪ್ರಯಾಸವಾದರೂ ಸಭೆಗೆ ದಯಮಾಡಿಸಿರುವುದರಿಂದ ಅವರನ್ನು ಸಭೆಯಲ್ಲಿ ಸನ್ಮಾನಿಸಿ, ಡಾ॥ ಕುವೆಂಪು ಮತ್ತು ನಂಜುಂಡಯ್ಯನವರನ್ನು ಅವರ ಮನೆಗಳಲ್ಲಿಯೇ ಸನ್ಮಾನಿಸಲಾಗುವುದೆಂದು ತಿಳಿಸಿದರು. ಅನಂತರ ಉಪಕುಲಪತಿಗಳು ವೆಂಕಟರಾಮಪ್ಪನವರಿಗೆ ಶಾಲು ಹೊದಿಸಿ, ಮಾಲಾರ್ಪಣೆಮಾಡಿ, ಫಲಸಮರ್ಪಣೆಮಾಡಿದರು. ಪ್ರೊ॥ ವೆಂಕಟರಾಮಪ್ಪನವರು ವೃದ್ಧರಾದರೂ ಅಸ್ಖಲಿತ ವಾಣಿಯಲ್ಲಿ ಭಾಷಣಮಾಡಿ ಕನ್ನಡ ಸ್ನಾತಕೋತ್ತರ ವಿಭಾಗವನ್ನು ತೆರೆದು ನಾನಾ ವಿಧಗಳಲ್ಲಿ ವಿಶ್ವವಿದ್ಯಾನಿಲಯದ ಅಧ್ಯಯನ ವ್ಯವಸ್ಥೆಯಲ್ಲಿ ಕನ್ನಡದ ಉನ್ನತ ವ್ಯಾಸಂಗಕ್ಕೆ ಪ್ರಾಶಸ್ತ್ಯವನ್ನು ತಂದುಕೊಟ್ಟ ಆಚಾರ್ಯ ಬಿ.ಎಂ.ಶ್ರೀ. ಅವರ ಕನ್ನಡ ಸೇವೆಯನ್ನು ಸ್ಮರಿಸಿದರು.

ಅನಂತರ ಪ್ರೊ॥ ಎಂ.ವಿ.ಸೀ. ಅವರು ಗ್ರಂಥಗಳನ್ನು ಬಿಡುಗಡೆ ಮಾಡಿ, ತಾವು ಬರೆದು ತಂದಿರುವ ಚಿಕ್ಕ ಭಾಷಣವನ್ನು ಓದುವ ಬದಲು ಭಾಷಣಮಾಡುವುದಾಗಿ ಹೇಳಿ, ಲಿಖಿತಭಾಷಣವನ್ನು ಸೂಕ್ತ ಕಂಡಂತೆ ಉಪಯೋಗಿಸಿಕೊಳ್ಳುವ ಸಲುವಾಗಿ ನಿರ್ದೇಶಕರಿಗೆ ಒಪ್ಪಿಸಿದರು. ಲಿಖಿತಭಾಷಣದ ಪ್ರಸಕ್ತ ಭಾಗವನ್ನು ಈ ಕೆಳಗೆ ಕೊಟ್ಟಿದೆ:

ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ವಜ್ರಮಹೋತ್ಸವ ಸಮಾರಂಭಗಳ ಅಂಗವಾಗಿ 1988ರಲ್ಲಿ ಪ್ರಕಟಿಸಿರುವ 7 ಪುಸ್ತಕಗಳನ್ನು ಬಿಡುಗಡೆ ಮಾಡಲು ಇಂದು ನನ್ನನ್ನು. ವಿಶ್ವವಿದ್ಯಾನಿಲಯದ 'ಮಗು'ವೇ ಆದ ನನ್ನನ್ನು, ಪ್ರೀತಿಯಿಂದ ಬರಮಾಡಿಕೊಂಡಿದೆ: ಗೌರವಿಸಿದೆ. ಇದಕ್ಕಾಗಿ ನಾನು ಅಧ್ಯಯನ ಸಂಸ್ಥೆಗೆ ಕೃತಜ್ಞನಾಗಿದ್ದೇನೆ: ಖುದ್ದಾಗಿ ಬಂದು ನನ್ನನ್ನು ಈ ಕನ್ನಡ ಹಬ್ಬದ ಔತಣಕ್ಕಾಗಿ ಕರೆದ ಡಾ॥ ಪರಮಶಿವಯ್ಯನವರಿಗೆ ನಾನು ಋಣಿ.

ಕನ್ನಡ ಅಧ್ಯಯನ ಸಂಸ್ಥೆ ತನ್ನ ಅರುವತ್ತು ವರ್ಷಗಳ ಸಾರ್ಥಕವಾದ ಆಯುಷ್ಯದಲ್ಲಿ ನೂರಕ್ಕೂ ಮಿಕ್ಕು ಮೌಲಿಕ ಗ್ರಂಥಗಳನ್ನು ಪ್ರಕಟಿಸಿದೆ. ಇದು ನಿಜಕ್ಕೂ ಹೆಮ್ಮೆಪಡತಕ್ಕ ಸಂಗತಿ. ಸಂಸ್ಥೆಯ ಪ್ರಾಚ್ಯ ಕಾವ್ಯಮಾಲಿಕೆಯಲ್ಲಿ 108 ಗ್ರಂಥಗಳು ಸೇರುತ್ತವೆ: ಈಗಾಗಲೇ 105 ಗ್ರಂಥಗಳು ಪ್ರಕಟವಾಗಿವೆ: ಇಂದು ಹೊರಬರುತ್ತಿರುವ ಮೂರು ಗ್ರಂಥಗಳು—ಸತ್ಯೇಂದ್ರಚೋಳ ಚಾರಿತ್ರ,

ಕಲ್ಲೇಲಿಂಗೇಶ್ವರ ಚಾರಿತ್ರ, ಪೂಜ್ಯಪಾದ ಚರಿತೆ—ಇವು ಸೇರಿ ಪ್ರಾಚ್ಯ ಕಾವ್ಯಮಾಲೆ ಅಷ್ಟೋತ್ತರಶತ ಗ್ರಂಥ ಕುಸುಮಮಾಲಿಕೆ ಆದಂತಾಯಿತು. ಈ ಮಾಲೆ ಶತಮಾನ ಉತ್ಸವದ ವೇಳೆಗೆ ಸಹಸ್ರಗ್ರಂಥಮಾಲೆ ಆಗಲಿ ಎಂದು ಹಾರೈಸುತ್ತೇನೆ. ಪರಮ ಶಿವಯ್ಯನವರ ಪ್ರತಿಭಾನ್ವಿತ ಸಮರ್ಥ ನಿರ್ದೇಶನದಲ್ಲಿ ಜಾನಪದ ಸಂರಕ್ಷಣೆ ಮತ್ತು ಪುನರುಜ್ಜೀವನಕ್ಕಾಗಿ ದುಡಿಯುತ್ತಿರುವ ಜಾನಪದ ವಿಭಾಗ ಈಗಾಗಲೇ 66 ಮೌಲಿಕ ಗ್ರಂಥಗಳನ್ನು ಹೊರತಂದಿದೆ ; ಇಂದು ಬಿಡುಗಡೆ ಆಗುತ್ತಿರುವ "ಗದ್ದಗಿಮಠ ಅವರ ಬರಹಗಳು" 67ನೆಯ ಪ್ರಕಟನೆ. ದಿವಂಗತ ಡಾ॥ ಜಿ. ವರದರಾಜರಾವ್ ಅವರ ದಕ್ಷ ನಿರ್ದೇಶನದಲ್ಲಿ ದಷ್ಟಪುಷ್ಟವಾಗಿ ಬೆಳೆದಿರುವ ಹರಿದಾಸ ಸಾಹಿತ್ಯ ವಿಭಾಗ, ಇಂದಿನ "ಪ್ರಸನ್ನ ವೆಂಕಟದಾಸರ ಭಾಗವತ"ವೂ ಸೇರಿದಂತೆ 6 ಪುಸ್ತಕಗಳನ್ನೂ ಹೊರತಂದಿದೆ. ಕನ್ನಡ ಅಧ್ಯಯನ ಸಂಸ್ಥೆ ರೂಪಗೊಳ್ಳುವ ಮುನ್ನ ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ ಕನ್ನಡ ಗ್ರಂಥಮಾಲೆಯ ಪುಸ್ತಕಗಳ ಲೆಕ್ಕ ಇದರಲ್ಲಿ ಸೇರಿಲ್ಲ. ಅವೂ ಸೇರಿದರೆ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗ ಪ್ರಕಟಿಸಿರುವ ಕನ್ನಡ ಗ್ರಂಥಗಳ ಸಂಖ್ಯೆ ಸುಮಾರು ಮುನ್ನೂರು ಆಗಬಹುದು. ಕನ್ನಡ ಅಧ್ಯಯನ ಸಂಸ್ಥೆಯ ಇತರ ಬೃಹದ್ ಯೋಜನೆಗಳ ಮೇರೆಗೆ ಪ್ರಕಟಿಸಿರುವ ಕನ್ನಡ ವಿಶ್ವಕೋಶ ಸಂಪುಟ ಗಳು, ಕನ್ನಡ ಸಾಹಿತ್ಯ ಚರಿತ್ರೆಯ ಸಂಪುಟಗಳು, ಕನ್ನಡ ಛಂದಸ್ಸಂಪುಟಗಳು. ಭಾಷಾ ಚರಿತ್ರೆಯ ಸಂಪುಟ—ಇವೆಲ್ಲವನ್ನೂ ಗಣನೆಗೆ ತೆಗೆದುಕೊಂಡರೆ, ಕನ್ನಡ ಅಧ್ಯಯನ ಸಂಸ್ಥೆಯ ಮೂಲಕ ನಮ್ಮ ಹೆಮ್ಮೆಯ ವಿಶ್ವವಿದ್ಯಾನಿಲಯ ಮಾಡಿರುವ ಕನ್ನಡ ಭಾಷಾ ಸಾಹಿತ್ಯ ಸೇವೆ ಅದ್ಭುತವಾದದ್ದು, ಅನುಪಮವಾದದ್ದು.

ಯಾವುದೇ ಅದ್ಭುತ ಸಾಧನೆ–ಸಿದ್ಧಿ, ಒಂದು ಪರಂಪರೆ ಇಲ್ಲದೆ ನಡೆಯುವುದು ಸಾಧ್ಯವಿಲ್ಲ. ಆಚಾರ್ಯ ಬಿ.ಎಂ.ಶ್ರೀ. ಅವರು 1927 ರಲ್ಲಿ ಮೈಸೂರು ವಿಶ್ವವಿದ್ಯಾ ನಿಲಯದಲ್ಲಿ ಕನ್ನಡ ಎಂ.ಎ. ತರಗತಿಗಳನ್ನು ಸ್ಥಾಪಿಸದೆ ಹೋಗಿದ್ದರೆ, ಆಧುನಿಕ ಕನ್ನಡ ಸಾಹಿತ್ಯದ ಚರಿತ್ರೆ ಯಾವ ರೂಪವನ್ನು ತಳೆಯುತ್ತಿತ್ತೊ, ಯಾವ ದಿಕ್ಕನ್ನು ಹಿಡಿಯುತ್ತಿತ್ತೋ, ಊಹಿಸುವುದು ಕಷ್ಟ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಮೂಲಕ ಜ್ಞಾನಪ್ರಸಾರವಾಗಬೇಕು ಎಂದು ಈ ವಿಶ್ವವಿದ್ಯಾನಿಲಯ ಸ್ಥಾಪನೆಗೆ ಕಾರಣಕರ್ತರಾದ ನಾಲ್ವಡಿ ಕೃಷ್ಣರಾಜ ಒಡೆಯರ ದಿವ್ಯ ಸಂದೇಶವೇ ಬಿ.ಎಂ.ಶ್ರೀ ಅವರಿಗೆ ಸ್ಫೂರ್ತಿ ನೀಡಿರಬೇಕು, ಜೊತೆಗೆ, ಅಂದು ವೈಸ್ ಛಾನ್ಸಲ ರವರಾಗಿದ್ದ ಬ್ರಜೇಂದ್ರನಾಥ ಸೀಲ್ ಅವರು ಮಾತೃಭಾಷಾ ಪ್ರೇಮಿಗಳಾದದ್ದ ರಿಂದಲೇ ಬಿ.ಎಂ.ಶ್ರೀ. ಅವರ ದೂರದೃಷ್ಟಿಯ ನಿರ್ಧಾರಕ್ಕೆ ಬೆಂಬಲ ಕೊಟ್ಟರು. ತರುವಾಯ ವೈಸ್ ಛಾನ್ಸಲರುಗಳಾದ ಎನ್. ಎಸ್. ಸುಬ್ಬರಾಯರು, ಶ್ರೀಮಾಲಿ ಅವರು, ಡಾ॥ ಕುವೆಂಪು, ಡಿ. ಜವರೇಗೌಡ ಇವರೆಲ್ಲರೂ ಕನ್ನಡದ ಕೆಲಸಕ್ಕೆ ನೀಡಿದ ಉತ್ತೇಜನ ಪ್ರೋತ್ಸಾಹ ಚಿರಸ್ಮರಣೀಯ. ಡಾ॥ ಕುವೆಂಪು ಅವರ ಕಾಲದಲ್ಲಿ

ಕನ್ನಡ ಅಧ್ಯಯನಸಂಸ್ಥೆ ಸ್ಥಾಪನೆಯಾದದ್ದು. ಪ್ರೊ॥ ಜವರೇಗೌಡರು, ಡಾ॥ ಹಾ. ಮಾ. ನಾಯಕರು, ನಿರ್ದೇಶಕರಾಗಿದ್ದ ಕಾಲದಲ್ಲಿ ಅಧ್ಯಯನ ಸಂಸ್ಥೆಯ ಪ್ರಕಟನ ಕಾರ್ಯ ತೀವ್ರಗತಿಯಿಂದ ಸಾಗಿ, ಇಂದಿನ ಉನ್ನತ ಮಟ್ಟವನ್ನು ಮುಟ್ಟಲು ಸಾಧ್ಯವಾಗಿದೆ. ಡಾ॥ ತಿಪ್ಪೇರುದ್ರಸ್ವಾಮಿಯವರು ಅವರ ಕಾರ್ಯವನ್ನು ಮುಂದುವರಿಸಿದರು. ಈಗ ನಿರ್ದೇಶಕರಾಗಿರುವ ಡಾ॥ ಜಿ. ಶಂ. ಪರಮಶಿವಯ್ಯನವರು ಈ ಭವ್ಯಪರಂಪರೆಯನ್ನು ಇತೋಪ್ಯತಿಶಯವಾಗಿ ಮುಂದುವರಿಸುವರೆಂಬ ಭರವಸೆಗೆ ಇಂದು ಬಿಡುಗಡೆಯಾಗುತ್ತಿರುವ ಏಳು ಮೌಲಿಕ ಗ್ರಂಥಗಳೇ ಸಾಕ್ಷಿ—ಎಂದು ಹೇಳಿ ಈ ಗ್ರಂಥಗಳನ್ನು ಸಂತೋಷದಿಂದ ಬಿಡುಗಡೆ ಮಾಡುತ್ತಿದ್ದೇನೆ.

೦ ೦ ೦

ಗ್ರಂಥಗಳನ್ನು ಬಿಡುಗಡೆ ಮಾಡಿದ ಮೇಲೆ ಎಂ. ವಿ. ಸೀ. ಅವರು ತಮ್ಮ ಭಾಷಣದಲ್ಲಿ ಕನ್ನಡ ವಾತಾವರಣದ ದೃಷ್ಟಿಯಿಂದ ಬೆಂಗಳೂರು ನಗರಕ್ಕೂ ಮೈಸೂರಿಗೂ ಇರುವ ಅಗಾಧ ವ್ಯತ್ಯಾಸವನ್ನು ಕುರಿತು ಪ್ರಸ್ತಾಪಿಸಿದರು. ಬೆಂಗಳೂರಿನಲ್ಲಿ ಕನ್ನಡದ ವಾತಾವರಣವೇ ಇಲ್ಲ. ಎಲ್ಲಿಗೆ ಹೋದರೂ ತಮಿಳು, ಮಲಯಾಳಂ, ಉರ್ದು ಭಾಷೆಗಳ ಮಾತೇ ಕೇಳಿಬರುತ್ತದೆ. ಬೆಂಗಳೂರಿನ ತಮಿಳರು ಬೆಂಗಳೂರನ್ನು ಕೇಂದ್ರಾಡಳಿತದ ಪ್ರದೇಶವನ್ನಾಗಿ ಮಾಡಿ ಎನ್ನುವವರೆಗೂ ಹೋಗಿದ್ದಾರೆ. ಮೈಸೂರಿನಲ್ಲಿ ಕನ್ನಡ ವಾತಾವರಣ ತನ್ನ ಸಹಜಗುಣವನ್ನು ಕಳೆದುಕೊಳ್ಳದೆ ಇರುವುದಕ್ಕೆ ಮೈಸೂರು ವಿಶ್ವವಿದ್ಯಾನಿಲಯ ಕಾರಣ. ಇಲ್ಲಿ ಕನ್ನಡ ಭದ್ರಬುನಾದಿ ಹಾಕಿದವರು ಬಿ.ಎಂ.ಶ್ರೀ. ಅವರು. ಅವರು ಪ್ರಾರಂಭಿಸಿದ ಕನ್ನಡ ಎಂ.ಎ. ತರಗತಿಗೆ ಸೇರಿ ಹೊರಬಂದ ಕುವೆಂಪು, ತೀ.ನಂ.ಶ್ರೀ., ರಾಜರತ್ನಂ, ಮೊದಲಾಗಿ ನಾವೆಲ್ಲ ಅವರ ಮಾರ್ಗದರ್ಶನದಲ್ಲಿ ಕನ್ನಡ ಸೇವೆಗೆ ತೊಡಗಿದೆವು. ಭಾಷಾಸೇವೆಯೂ ದೇಶಸೇವೆ ಎಂಬುದು ಅಂದು ನಮ್ಮೆಲ್ಲರ ಧ್ಯೇಯವಾಕ್ಯವಾಗಿತ್ತು. ಕುವೆಂಪು 'ಪಾಂಚಜನ್ಯ'ವನ್ನು ಮೊಳಗಿಸಿ, 'ಕನ್ನಡ ಡಿಂಡಿಮ' ಬಾರಿಸಿ ಕನ್ನಡ ಜಾಗೃತಿಯನ್ನು ಉಂಟುಮಾಡಿದರು. ನಾನು ಇವರೆಲ್ಲರ ಪ್ರಭಾವಕ್ಕೆ ಒಳಗಾಗಿದ್ದೇನೆ. ಯಾವುದೇ ರೀತಿಯಲ್ಲಿ ಕನ್ನಡಕ್ಕೆ ಅನ್ಯಾಯವಾದರೆ ನನಗೆ ನೋವಾಗುತ್ತದೆ. ಕನ್ನಡ ಚಳವಳಿ, ಹೋರಾಟ, ಇವಕ್ಕೆ ಬೀಜಮಂತ್ರವನ್ನು ಉಸುರಿದವರು ಬಿ.ಎಂ.ಶ್ರೀ. ಕನ್ನಡ ಭಾಷೆ ಸಾಹಿತ್ಯ ಬೆಳೆಯದೆ ಹೋದರೆ ಕನ್ನಡ ಪಾಂಡಿತ್ಯ. ಸಂಶೋಧನೆಗಳೂ ಬೆಳೆಯುವುದಿಲ್ಲ. ಕನ್ನಡ ಅಧ್ಯಯನ ಸಂಸ್ಥೆಯ ಸಂಶೋಧನ ವಿಭಾಗದ ಇಂದಿನ ವಿದ್ವಾಂಸವರ್ಗ ನಿವೃತ್ತರಾದಮೇಲೆ ಅವರ ಸ್ಥಾನವನ್ನು ತುಂಬುವವರು ಯಾರು ? ಗ್ರಂಥಸಂಪಾದನೆ ಕಷ್ಟದ ಕೆಲಸ. ಸಂಪಾದಕ ಬಹುಶ್ರುತನಾಗಿರಬೇಕು. ಗ್ರಂಥಸಂಪಾದನ ಶಾಸ್ತ್ರದ ಬೆಳವಣಿಗೆಗೆ ವಿಶ್ವವಿದ್ಯಾನಿಲಯ ಪ್ರೋತ್ಸಾಹ ಉತ್ತೇಜನ ನೀಡಬೇಕು.

ಈಗ ಬಿಡುಗಡೆ ಮಾಡಿರುವ ಗ್ರಂಥಗಳೆಲ್ಲ ಗುಣಮಟ್ಟದ ದೃಷ್ಟಿಯಿಂದ ಬೆಲೆಯುಳ್ಳವೇ. ಆದರೆ ಕೇಂದ್ರ ಸರ್ಕಾರದ ಸಹಾಯವನ್ನು ಪಡೆದು ಕೂಡ ದುಬಾರಿ ಬೆಲೆ ಇಟ್ಟಿರುವುದು ಸರಿಯಲ್ಲ. ಗ್ರಂಥಪ್ರಕಾಶನ ಕಾರ್ಯದಲ್ಲಿ ವಿಶ್ವವಿದ್ಯಾನಿಲಯ ಲಾಭನಷ್ಟ ಇಲ್ಲದ ರೀತಿನೀತಿ ಅನುಸರಿಸಬೇಕು, ಎಂದರು.

ಅಧ್ಯಕ್ಷತೆ ವಹಿಸಿದ್ದ ಶ್ರೀಮತಿ ಶೆಲ್ವಿದಾಸ ಅವರು ತಮ್ಮ ಮಾತೃಭಾಷೆ ತಮಿಳಾದರೂ ತಾವು ಕರ್ನಾಟಕದ ಪ್ರಜೆ, ಕನ್ನಡದ ಬಗೆಗೆ ತಮಗೆ ಪ್ರೀತಿ ಅಭಿಮಾನ ಇದೆ, ಮಾತೃಭಾಷೆಯ ಪ್ರೀತಿಯನ್ನು ಬಿಡದೆ ಎಷ್ಟು ಭಾಷೆಗಳನ್ನು ಕಲಿತರೂ ಒಳ್ಳೆಯದೆ ಎಂದು ಹೇಳಿ, ಕನ್ನಡ ಅಧ್ಯಯನ ಸಂಸ್ಥೆಯ ಚಟುವಟಿಕೆಗಳಿಗೆ ಎಲ್ಲ ಸಹಾಯವನ್ನೂ ನೀಡುವುದಾಗಿ ಭರವಸೆ ಕೊಟ್ಟರು.

**ಮುಳಿಯ ತಿಮ್ಮಪ್ಪಯ್ಯ ಶತಮಾನೋತ್ಸವ:** ಕನ್ನಡದ ಸೇವೆಯನ್ನು ಅಧ್ಯಾಪನ, ಭಾಷಣ, ಕಾವ್ಯವಾಚನ, ಸಾಹಿತ್ಯರಚನೆಗಳ ಮೂಲಕ ಜೀವನವ್ರತವೆಂಬಂತೆ ನಡೆಸಿಕೊಂಡು ಬಂದವರು ಮುಳಿಯ ತಿಮ್ಮಪ್ಪಯ್ಯನವರು (ಜ. 3-3-1888—ಮ. 16-1-1950). ಇವರ ಜನ್ಮಶತಮಾನೋತ್ಸವವನ್ನು ಅನೇಕ ಕಡೆ ಆಚರಿಸಲಾಗಿದೆ. ದ.ಕ. ಜಿಲ್ಲೆಯ ವಿಟ್ಲ ಸಮೀಪದ **ಮುಳಿಯ** ಇವರ ಹುಟ್ಟೂರು, ಅನ್ವರ್ಥಕ ವಿಶೇಷಣವೂ ಹೌದು. ಕನ್ನಡ, ಸಂಸ್ಕೃತ, ಸಂಗೀತಗಳಲ್ಲಿ ವಿಶೇಷ ಪರಿಣತರಾದ ಇವರು ಮೊದಲು ಮಂಗಳೂರಿನ ಕೆನರ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರಾಗಿ, ಮತ್ತೆ ಸಂತ ಅಲೋಸಿಯಸ್ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ, 1948ರಲ್ಲಿ ನಿವೃತ್ತರಾದರು. 'ಕೋಗಿಲೆ' ಎಂಬ ಮಾಸಪತ್ರಿಕೆಯ ಸಂಪಾದಕರಾಗಿದ್ದರು. 1931ರಲ್ಲಿ ಕಾರವಾರದಲ್ಲಿ ನಡೆದ ಸಾಹಿತ್ಯ ಸಮ್ಮೇಳನಾಧ್ಯಕ್ಷರು, 1941ರಲ್ಲಿ ಲಕ್ಷ್ಮೇಶ್ವರದಲ್ಲಿ ಜರುಗಿದ ಪಂಪನ ಸಹಸ್ರ ಸಾಂವತ್ಸರಿಕೋತ್ಸವದ ಅಧ್ಯಕ್ಷರು—ಆಗಿದ್ದರು. ಕಾದಂಬರಿ, ನಾಟಕ, ಪ್ರಬಂಧ, ಕಾವ್ಯ, ಸಂಗ್ರಹ, ವಿಮರ್ಶೆ, ಸಂಶೋಧನೆ, ಅನುವಾದ, ಜಾನಪದ—ಮುಂತಾದ ವೈವಿಧ್ಯದ ಸುಮಾರು ಇಪ್ಪತ್ತು ಕೃತಿಗಳನ್ನು ರಚಿಸಿದ್ದಾರೆ. ಇವುಗಳಲ್ಲಿ **ಸೊಬಗಿನ ಬಳ್ಳಿ** ಅಚ್ಚಗನ್ನಡದ ಪದ್ಯಕಾವ್ಯ; ನಾಡೋಜ ಪಂಪ ಮತ್ತು ಪಾರ್ತಿಸುಬ್ಬ—ಇವು ವಿಮರ್ಶಾತ್ಮಕ ಸಂಶೋಧಾತ್ಮಕ ರಚನೆಗಳು; ಕವಿರಾಜಮಾರ್ಗ ವಿವೇಕ, ಇವರ ವಿಶೇಷ ಪಾಂಡಿತ್ಯದ ಲಾಕ್ಷಣಿಕ ವಿಮರ್ಶಗ್ರಂಥ. ನವನೀತ ರಾಮಾಯಣ—ರಘುಪಂಪೆ ರಗಳೆಯ ಕಾವ್ಯ.

ಮುಳಿಯ ತಿಮ್ಮಪ್ಪಯ್ಯನವರ ಜನ್ಮಶತಮಾನದ ಕಾರ್ಯಕ್ರಮವಾಗಿ 29-12-1988ರಂದು ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನವು ಬೆಂಗಳೂರಿನ **ಗೋಖಲೆ ಸಾರ್ವಜನಿಕ ಸಂಸ್ಥೆಯ ಸಭಾಂಗಣದಲ್ಲಿ** ವೆಂಕಟರಂಗಪ್ಪ ದತ್ತಿ ಉಪನ್ಯಾಸವಾಗಿ "ಸಂಶೋಧನ ಕ್ಷೇತ್ರಕ್ಕೆ ಮುಳಿಯ ತಿಮ್ಮಪ್ಪಯ್ಯನವರ ಕೊಡುಗೆ" ಎಂಬ

ಉಪನ್ಯಾಸವನ್ನು ವಿದ್ವಾನ್ ಟಿ. ಕೇಶವ ಭಟ್ಟರಿಂದ ನೆರವೇರಿಸಿದೆ. (ಈ ಉಪನ್ಯಾಸವು ಕರ್ನಾಟಕ ಲೋಚನದ ಮುಂದಿನ ಸಂಚಿಕೆಯಲ್ಲಿ ಪ್ರಕಟವಾಗಲಿದೆ). 3, 4, 5, ಮಾರ್ಚ್, 1989ರಲ್ಲಿ ದ.ಕ. ಜಿಲ್ಲೆಯ ಮುಳಿಯದ ಸಮೀಪವಿರುವ **ಮುಚ್ಚಿರಪದವು ಹಿರಿಯ ಪ್ರಾಥಮಿಕ ಶಾಲೆಯಲ್ಲಿ** ಅವರ ಹುಟ್ಟೂರಿನ ಗೌರವವಾಗಿ ಅಲ್ಲಿಯ ಅಭಿಮಾನಿಗಳು ಮೂರು ದಿನಗಳ ಸಂಭ್ರಮದ ಕಾರ್ಯಕ್ರಮಗಳನ್ನು ನಡೆಸಿರುತ್ತಾರೆ. ಮಂಗಳೂರಿನ ಸಂತ ಅಲೋಸಿಯಸ್ ಕಾಲೇಜಿನಲ್ಲಿ ಮಾರ್ಚ್ 18, 19ರಲ್ಲಿ ಅಲ್ಲಿಯ ಶತಮಾನೋತ್ಸವ ಸಮಿತಿಯ ಮೂಲಕ 'ಅಭಿನವ ನಾಡೋಜ' ಮುಳಿಯ ತಿಮ್ಮಪ್ಪಯ್ಯನವರ ಜನ್ಮಶತಮಾನೋತ್ಸವಗಳನ್ನು ಸಮರ್ಪಕವಾಗಿ ಆಚರಿಸಲಾಗಿದೆ. ಮೈಸೂರಿನಲ್ಲಿ **ದೇ. ಜ. ಗೌ. ಸಾಂಸ್ಕೃತಿಕ ಪ್ರತಿಷ್ಠಾನದ** ಆಶ್ರಮದಲ್ಲಿ 10 - 3 - 1989 ರಂದು ಮುಳಿಯ ತಿಮ್ಮಪ್ಪಯ್ಯ ಶತಮಾನೋತ್ಸವದ ವಿಚಾರ ಸಂಕಿರಣ ನಡೆಸಲಾಗಿದೆ. **ಮುಂಬಯಿ ವಿಶ್ವವಿದ್ಯಾಲಯದಲ್ಲಿ** 25–3–1989ರಂದು ಒಂದು ದಿನದ ಪೂರ್ಣ ಕಾರ್ಯಕ್ರಮವಾಗಿ, ಹಲವು ಉಪನ್ಯಾಸಗಳ ಮೂಲಕ ಮುಳಿಯ ತಿಮ್ಮಪ್ಪಯ್ಯನವರ ಜನ್ಮಶತಾಬ್ದಿಯುತ್ಸವವನ್ನು ಆಚರಿಸಿರುತ್ತಾರೆ.

ಈ ಎಲ್ಲ ಉತ್ಸವಗಳ ಕಾರ್ಯಕ್ರಮಗಳು ದಿವಂಗತರ ಸಾರಸ್ವತ ಜೀವನ ಚಿತ್ರವನ್ನು ಜನತೆಯ ಮುಂದಿಡುವುದರೊಂದಿಗೆ, ಅವರ ಕೃತಿಪರಿಚಯ ಮಾಡಿ, ಕನ್ನಡದ ಸಾಹಿತ್ಯ ಪ್ರಸಾರವನ್ನು ಯಶಸ್ವಿಯಾಗಿ ಈಡೇರಿಸಿವೆಯೆಂದು ತಿಳಿದುಕೊಳ್ಳಬಹುದು.

---

# ಶ್ರದ್ಧಾಂಜಲಿ

**ಕುಕ್ಕಿಲ ಕೃಷ್ಣಭಟ್ಟರು :** ಯಕ್ಷಗಾನ, ಸಂಗೀತ, ಸಾಹಿತ್ಯಗಳಲ್ಲಿ ವಿಶೇಷ ಪರಿಣತರು; ಕೃಷಿ–ಸಾಹಿತ್ಯಕೃಷಿ ಎಂಬ ಎರಡನ್ನೂ ಯಶಸ್ವಿಯಾಗಿ ನಡೆಸಿಕೊಂಡು ಬಂದವರು; ಸಂಶೋಧಕ ಲೇಖಕರಾಗಿ ಖ್ಯಾತರಾದವರು ಕುಕ್ಕಿಲ ಕೃಷ್ಣಭಟ್ಟರು. ಇವರು 7–6–1911 ರಲ್ಲಿ ಜನಿಸಿ, ತಮ್ಮ 77 ವರ್ಷಗಳ ಸಾರ್ಥಕಜೀವನವನ್ನು 21-7-1988ರಂದು ಕೊನೆಗೊಳಿಸಿರುವುದು ವಿದ್ವಾಂಸರ ಬಳಗಕ್ಕೆ ದುಃಖದ ಸಂಗತಿ. ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲೂಕಿನ ಕುಕ್ಕಿಲ ಇವರ ಮನೆಯೂರು. ಶಾಲಾಭ್ಯಾಸಂಗ ಎಂಟನೇ ತರಗತಿಯಷ್ಟೇ ಆದರೂ ಸಂಸ್ಕೃತ-ಕನ್ನಡಗಳಲ್ಲಿ ಆಳವಾದ ಪಾಂಡಿತ್ಯ ಪಡೆದಿದ್ದರು. ನಾಟ್ಯಶಾಸ್ತ್ರ-ಕಾವ್ಯಶಾಸ್ತ್ರಗಳ ಪಾಂಡಿತ್ಯದ ಆಳಕ್ಕೆ ಇಳಿದಿದ್ದರು. ಯಕ್ಷಗಾನ ಭಾಗವತಿಕೆ ಮಾಡುತ್ತಿದ್ದರು. ಕಡೆಂಗೋಡ್ಲು ಶಂಕರಭಟ್ಟರ 'ರಾಷ್ಟ್ರಬಂಧು' ವಾರಪತ್ರಿಕೆಯಲ್ಲಿ ಸ್ವಲ್ಪಕಾಲ ಕೆಲಸಮಾಡಿದ್ದಾರೆ. ಯಕ್ಷಗಾನ ಕವಿ ಪಾರ್ತಿಸುಬ್ಬನ ಹೆಸರನ್ನುಳಿಸಿದ ಧೀರ ಲೇಖಕರು ಕುಕ್ಕಿಲ ಕೃಷ್ಣಭಟ್ಟರು. ಇವರ ಸಂಶೋಧ ಲೇಖನಗಳು ಹಲವು ಪತ್ರಿಕೆಗಳಲ್ಲಿ ಹಾಗೂ ವಿಶೇಷ ಸಂಚಿಕೆಗಳಲ್ಲಿ ಬಂದಿವೆ.

ಕುಂಬಳೆ ಪಾರ್ತಿಸುಬ್ಬ ಕವಿಯ ಕಾಲ ಮತ್ತು ಕರ್ತೃತ್ವ ನಿರ್ಣಯ (1961) ಅವರ ಸುದೀರ್ಘ ಉಪನ್ಯಾಸದ ಕೃತಿ. ಭಾರತೀಯ ಸಂಗೀತ ಶಾಸ್ತ್ರ (1971) ವಿಶೇಷ ಮಹತ್ತ್ವವುಳ್ಳದು. ಪಾರ್ತಿಸುಬ್ಬನ ಯಕ್ಷಗಾನಗಳು (1975) – ಇದು ಪಾರ್ತಿಸುಬ್ಬನ ಸಭಾಲಕ್ಷಣವೂ ಸೇರಿರುವ ಹತ್ತು ಪ್ರಸಂಗಗಳ ಸಂಪಾದನ ಗ್ರಂಥ. ನಾಗವರ್ಮನ ಛಂದೋಂಬುಧಿ (1975) ಸಂಪಾದಿತ ಶಾಸ್ತ್ರ ಕೃತಿ. ಎಕ್ಕಲ ಗಾಣ, ಬೆದಂಡೆ, ಚತ್ತಾಣ—ಇವುಗಳ ಬಗ್ಗೆ ಹೊಸ ಸಂಶೋಧನೆಗಳು ಇವರಿಂದ ಆಗಿವೆ. ಸಾಹಿತ್ಯಾಭ್ಯಾಸಿಗಳಿಗೆ ತುಂಬ ಉಪಯುಕ್ತ ಸಾಹಿತ್ಯ-ಸಂಶೋಧನೆಗಳನ್ನು ಮಾಡಿದ್ದಾರೆ. ಕರ್ನಾಟಕ ಲೋಚನ ಎಲ್ಲ ಅಭಿಮಾನಿ ಕನ್ನಡಿಗರ ವಾಙ್ಮುಖಿಯಾಗಿ ದಿವಂಗತರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

**ಟಿ. ಕೆ. ರಾಮರಾವ್ :** ಕನ್ನಡ ಪತ್ತೇದಾರಿ ಕಾದಂಬರಿಗೆ ಹೊಸಗನ್ನಡ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಗಣ್ಯಸ್ಥಾನ ಇರಲಿ, ಸ್ಥಾನವೇ ದೊರಕಿಲ್ಲ. ಆದರೆ, ಈ ಕಾದಂಬರೀ ಪ್ರಕಾರಕ್ಕೆ ದೀರ್ಘಕಾಲದ ಇತಿಹಾಸವಿದೆ. ಪತ್ತೇದಾರಿ ಕಾದಂಬರಿಯ ಜನಪ್ರಿಯತೆಯನ್ನು ಮಾತ್ರ ಯಾರೂ ಪ್ರಶ್ನಿಸುವಂತಿಲ್ಲ. ಟಿ. ಕೆ. ರಾಮರಾವ್ ಅವರು ಜನಪ್ರಿಯ ಕಾದಂಬರಿಕಾರರಾಗಿದ್ದರು ಎಂಬಲ್ಲಿ ಸಂದೇಹವಿಲ್ಲ. ಇಂಗ್ಲಿಷ್ ಸಾಹಿತ್ಯ ಪ್ರಪಂಚದಲ್ಲಿ ಷೆರ್‌ಲಾಕ್‌ಹೋಮ್ಸ್, ಅಗಾಥ ಕ್ರಿಸ್ಟಿ. ಮುಂತಾದವರ ಪತ್ತೇದಾರಿ ಕಥೆ ಕಾದಂಬರಿಗಳು ಜನಪ್ರಿಯವಾಗಿದ್ದುವು ಮಾತ್ರವಲ್ಲ,

ವಿಮರ್ಶಕರ ಮೆಚ್ಚುಗೆಯನ್ನೂ ಪಡೆದಿದ್ದುವು. ವಿನೋದ ಸಾಹಿತ್ಯ ಹಾಸ್ಯರಸ ಪ್ರಧಾನವಾದರೆ, ಪತ್ತೇದಾರಿ ಕಾದಂಬರಿಗಳು ವಿಸ್ಮಯವನ್ನು ಹುಟ್ಟಿಸಿ ಅದ್ಭುತ ರಸಪ್ರಧಾನ ಎನ್ನಬಹುದು. ಟಿ. ಕೆ. ರಾಮರಾಯರು ತಮ್ಮ ಕಾದಂಬರಿ ಕಥೆಗಳಲ್ಲಿ ಸಾಹಿತ್ಯಿಕ ಅಂಗಗಳಿಗೂ ಗಮನ ಕೊಡುತ್ತಿದ್ದರು. ಜನಮನ್ನಣೆಯನ್ನೇನೋ ಪಡೆದಿದ್ದರು. ವಿಮರ್ಶಕರು ಪತ್ತೇದಾರಿ ಕಾದಂಬರಿ ಪ್ರಕಾರವನ್ನು ಕಡೆಗಣಿಸುತ್ತಿದ್ದಾರೆ ಎಂಬ ವೇದನೆಯಂತೂ ಅವರಲ್ಲಿತ್ತು. ಈ ಸಾಹಿತ್ಯ ಪ್ರಕಾರಕ್ಕೆ ಒಂದು ಗಣ್ಯತೆ, ಮಾನ್ಯತೆ ದೊರಕಿಸಬೇಕೆಂಬುದು ಅವರ ಪ್ರಾಮಾಣಿಕ ಅಭಿಲಾಷೆಯಾಗಿತ್ತು. ಅವರು ಇನ್ನೂ ಹಲವು ಕಾಲ ಬದುಕಿದ್ದರೆ ಅವರು ತಮ್ಮ ಪ್ರಯತ್ನದಲ್ಲಿ ಬಹುಶಃ ಸಫಲರಾಗುತ್ತಿದ್ದರು. ಅಷ್ಟರಲ್ಲಿ ಅವರು ತೀರಿಕೊಂಡದ್ದು ಜನಪ್ರಿಯ ಸಾಹಿತ್ಯ ಪ್ರಕಾರಕ್ಕೆ ಅಪಾರ ನಷ್ಟ.

**ಶ್ರೀಕೃಷ್ಣ ಆಲನಹಳ್ಳಿ:** ತಮ್ಮ ವಿದ್ಯಾರ್ಥಿ ದಶೆಯಲ್ಲಿಯೇ 'ಮಣ್ಣಿನ ಹಾಡು' ಎಂಬ ಕವಿತಾ ಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪುರಸ್ಕಾರವನ್ನು ಪಡೆದ ಶ್ರೀ ಆಲನಹಳ್ಳಿ ಕೃಷ್ಣ ಅವರು (ಜ. ಏಪ್ರಿಲ್ 3. 1947) ಪತ್ರಿಕಾಕರ್ತರಾಗಿ, ಸುಮಾರು 10 ವರ್ಷಕಾಲ ಕನ್ನಡ ಅಧ್ಯಾಪಕರಾಗಿ ಸಾಹಿತ್ಯ ಪ್ರಪಂಚದಲ್ಲಿ ತಮ್ಮ ಕಥೆ, ಕಾದಂಬರಿಗಳಿಂದ ಬಹು ವೇಗನೆ ಅಖಿಲ ಕರ್ನಾಟಕ ಖ್ಯಾತಿಯನ್ನು ಗಳಿಸಿದರು. ಇವರ 'ಕಾಡು' (1971), 'ಪರಸಂಗದ ಗೆಂಡೆ ತಿಮ್ಮ' ಮತ್ತು 'ಭುಜಂಗಯ್ಯನ ದಶಾವತಾರಗಳು' (1982) ಇವರಿಗೆ ಅಪಾರ ಜನಪ್ರಿಯತೆಯನ್ನು ಗಳಿಸಿ ಕೊಟ್ಟುವು. ಮೊದಲ ಎರಡು ಕಾದಂಬರಿಗಳು ಚಲನಚಿತ್ರಗಳಾಗಿಯೂ ಸಹೃದಯರ ಗಮನ ಸೆಳೆದವು. 15 ಗಣ್ಯ ಕೃತಿಗಳನ್ನು ಕನ್ನಡಕ್ಕೆ ಕೊಟ್ಟ ಈ ಪ್ರಖರ ಪ್ರತಿಭಾಶಾಲಿ ಯುವ ಸಾಹಿತಿ ತಮ್ಮ 42ನೆಯ ವಯಸ್ಸಿನಲ್ಲಿಯೇ ಕಣ್ಣುಮುಚ್ಚಿದ್ದು ನಾಡಿನ ನುಡಿಯ ದುರ್ದೈವ.

**ಡಾ॥ ವಸಂತಕವಲಿ** ಅವರನ್ನು 'ಆಕಾಶವಾಣಿ' ಶ್ರೋತೃಗಳಿಗೆ ಪರಿಚಯ ಮಾಡಿಕೊಡಬೇಕಾದ ಅಗತ್ಯವಿಲ್ಲ. ನಾಟಕಕಾರರಾಗಿ ಸ್ವಂತ ನಾಟಕಗಳನ್ನೂ ಇತರರ ನಾಟಕ, ರೂಪಕಗಳನ್ನೂ 'ಕುಮಾರಭಾಸ' ಎಂಬ ಕಾವ್ಯನಾಮದಲ್ಲಿ ಆಕಾಶವಾಣಿಯ ನಾಟಕ ವಿಭಾಗದ ನಿರ್ವಾಹಕರಾಗಿ ಅತ್ಯಂತ ಪರಿಣಾಮಕಾರಿಯಾಗಿ ಪ್ರಸಾರಕ್ಕೆ ಅಣಿಗೊಳಿಸುತ್ತಿದ್ದರು. ಸ್ವತಃ ಗಾಯಕರಾಗಿದ್ದ ಇವರು ಉತ್ತರಾದಿ ದಕ್ಷಿಣಾದಿ ಸಂಗೀತ ಶೈಲಿಗಳ ಸಮನ್ವಯವನ್ನು ಸಾಧಿಸುವಲ್ಲಿ ಪ್ರಯತ್ನಶೀಲರಾಗಿದ್ದರು. ಸಂಗೀತ ಪ್ರಪಂಚಕ್ಕೆ ಕರ್ನಾಟಕದ ಕೊಡುಗೆಯ ವೈಶಿಷ್ಟ್ಯ ವಿಸ್ತಾರಗಳನ್ನು ವಿಶಾಲಲೋಕಕ್ಕೆ ಆಕಾಶವಾಣಿಯ ಮೂಲಕ ಪರಿಚಯ ಮಾಡಿಕೊಡುವುದರಲ್ಲಿ ತೀವ್ರ ಆಸಕ್ತಿ ವಹಿಸಿದ್ದರು. ಸಂಸ್ಕೃತ ವಿದ್ವಾಂಸರಾಗಿದ್ದ ಇವರಿಗೆ ಸಹಜವಾಗಿಯೇ ಪ್ರಾಚೀನ ಕನ್ನಡ

ಸಾಹಿತ್ಯದಲ್ಲಿ ಒಲವು ಹೆಚ್ಚಾಗಿದ್ದು, ಪ್ರಸಾರ ಕಾರ್ಯಕ್ರಮಗಳಲ್ಲಿ ಅದಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡುತ್ತಿದ್ದರು. 59ರ ವಯಸ್ಸಿನಲ್ಲಿಯೇ ಇವರು ನಿಧನರಾದದ್ದು (17-11-1988) ದುಃಖದ ಸಂಗತಿ.

**ವೆಂ. ಮು. ಜೋಶಿ** ಅವರು ವಿಶೇಷವಾಗಿ ಸೈನ್ಯಕಾರ್ಯಾಚರಣೆಯ ಹಿನ್ನೆಲೆಯುಳ್ಳ ಕತೆಗಳನ್ನು ಬರೆಯುವುದರಲ್ಲಿ ನಿಷ್ಣಾತರಾಗಿದ್ದು, ಕಥಾಪ್ರಪಂಚದಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ಪಡೆದಿದ್ದರು. ಚಲನಚಿತ್ರ ಮತ್ತು ರಂಗಭೂಮಿ ನಟರಾಗಿದ್ದ ಇವರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಜಂಟಿ ನಿರ್ದೇಶಕರಾಗಿ ನಿವೃತ್ತರಾಗಿದ್ದರು. ಸ್ವಲ್ಪಕಾಲ ಉಡುಪಿಯ ಪ್ರಾದೇಶಿಕ ಜಾನಪದ ಕಲೆಗಳ ಸಂಪನ್ಮೂಲ ಕೇಂದ್ರದಲ್ಲಿ ಸಂಶೋಧಕರಾಗಿ ಸೇವೆ ಸಲ್ಲಿಸಿದ್ದರು. ಹಲವಾರು ಕನ್ನಡ ಮತ್ತು ಮರಾಠಿ ಕೃತಿಗಳನ್ನು ಪರಸ್ಪರ ಆಯಾ ಭಾಷೆಗಳಿಗೆ ಭಾಷಾಂತರ ಮಾಡಿದ್ದಾರೆ. ಈ ಕಲಾವಿದ ಸಾಹಿತಿ ತಮ್ಮ 64ನೆಯ ವಯಸ್ಸಿನಲ್ಲಿ (27-11-88ರಲ್ಲಿ) ನಿಧನರಾದರು.

**ಕಮಲಾದೇವಿ ಚಟ್ಟೋಪಾಧ್ಯಾಯ** ಪ್ರತಿಭಾಶಾಲಿ ಬಂಗಾಲಿ ಕಲಾವಿದ ಕವಿ ನಟ ಹರೀಂದ್ರನಾಥ ಚಟ್ಟೋಪಾಧ್ಯಾಯ ಅವರ ಪತ್ನಿಯಾಗಿದ್ದರೂ ಸ್ವತಂತ್ರವಾದ ವ್ಯಕ್ತಿತ್ವವನ್ನು ತಮ್ಮ ಬಹುಮುಖ ಕಲಾಸೇವೆಯಿಂದ ಪಡೆದುಕೊಂಡಿದ್ದ ಧೀಮಂತ ಮಹಿಳೆ. ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದ್ದ ಇವರು ತಮ್ಮ ಬಹುಮುಖ ಸಾಧನೆಗಳಿಂದಾಗಿ ಅಖಿಲ ಭಾರತ ಖ್ಯಾತಿಯನ್ನು ಗಳಿಸಿದ್ದು, ಪದ್ಮ ವಿಭೂಷಣ ಪ್ರಶಸ್ತಿಯನ್ನು ಪಡೆದಿದ್ದರು. 95 ವರ್ಷಗಳ ಸಾರ್ಥಕವಾದ ತುಂಬು ಬದುಕನ್ನು ಬಾಳಿದ ಕಮಲಾದೇವಿ ಈಚೆಗೆ ನಿಧನರಾದರು.

**ಪ್ರೊ|| ಎಂ. ಎ. ಕೃಷ್ಣಸ್ವಾಮಿ ನಿಧನ**

ಮಾರ್ಚಿ 14ರಂದು ವಿಶ್ರಾಂತ ಸಂಸ್ಕೃತ ಪ್ರಾಧ್ಯಾಪಕ ಎಂ. ಎ. ಕೃಷ್ಣಸ್ವಾಮಿ ಅವರು ಭಾನುವಾರ ಬೆಂಗಳೂರು ನಗರದಲ್ಲಿ ನಿಧನ ಹೊಂದಿದರು. ಅವರಿಗೆ 74 ವರ್ಷ ವಯಸ್ಸಾಗಿತ್ತು. ಪತ್ನಿ, ಒಬ್ಬ ಪುತ್ರ ಹಾಗೂ ಒಬ್ಬ ಪುತ್ರಿಯನ್ನು ಅಗಲಿದ್ದಾರೆ.

ಮೈಸೂರು ಮಹಾರಾಜಾ ಕಾಲೇಜಿನ ಸಂಸ್ಕೃತ ವಿಭಾಗದ ಬಿ.ಎ. (ಆನರ್ಸ್) ಹಾಗೂ ಎಂ.ಎ. ತರಗತಿಗಳಲ್ಲಿ ಮೇಧಾವಿ ವಿದ್ಯಾರ್ಥಿಯಾಗಿ ಹಲವಾರು ಚಿನ್ನದ ಪದಕಗಳನ್ನು ಗಳಿಸಿದ್ದರು. ಶ್ರೇಷ್ಠ ಸಂಸ್ಕೃತ ವಿದ್ವಾಂಸರೆಂಬ ಖ್ಯಾತಿಯನ್ನೂ ಹೊಂದಿದ್ದರು. ಕನ್ನಡದಲ್ಲಿ ಅನೇಕ ಪಾಂಡಿತ್ಯಪೂರ್ಣ ಲೇಖನಗಳನ್ನು ಬರೆದಿದ್ದಾರೆ.

ನಮ್ಮನ್ನಗಲಿದ ಈ ಎಲ್ಲರಿಗೂ ಸದ್ಗತಿಯನ್ನು ಕೋರುತ್ತೇವೆ. 



# ಲೋಚನ ಲೇಖಕರು

1. ಶ್ರೀಮತಿ ವೈ. ಸಿ. ಭಾನುಮತಿ
ಸಂಪಾದನ ವಿಭಾಗ
ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ
ಮೈಸೂರು - 570 006

2. ಡಾ॥ ಆರ್. ಎಸ್. ಶಿವಗಣೇಶಮೂರ್ತಿ
ಸಂಸ್ಕೃತ ವಿಭಾಗ
ಮೈಸೂರು ವಿಶ್ವವಿದ್ಯಾಲಯ
ಮೈಸೂರು–570 006

3. ಶ್ರೀ ಪಿ. ವಿ. ಕೃಷ್ಣಮೂರ್ತಿ
4/5, ಮಾರಮ್ಮನ ಗುಡಿ ಬ್ಲಾಕ್
ಹಳೇ ಮದ್ರಾಸು ರಸ್ತೆ
ಇಂದಿರಾನಗರ
ಬೆಂಗಳೂರು - 560 038

4. ಶ್ರೀ ಹೆಚ್. ಜಿ. ಶ್ರೀಧರ
ಕನ್ನಡ ಉಪನ್ಯಾಸಕ
ವಿವೇಕಾನಂದ ಕಾಲೇಜು
ಪುತ್ತೂರು–ದ.ಕ. - 574 201

5. ಡಾ॥ ಎಂ. ಚಿದಾನಂದಮೂರ್ತಿ
'ಮಿಂಚು', 6/ಎ, 4ನೇ ತಿರುವು
11ನೇ ಮುಖ್ಯರಸ್ತೆ
ವಿಜಯನಗರ 2ನೇ ಹಂತ
ಬೆಂಗಳೂರು-560 040

6. ಡಾ॥ ಟಿ. ವಿ. ವೆಂಕಟಾಚಲ ಶಾಸ್ತ್ರೀ
ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ
ಮೈಸೂರು–570 006

7. ಶ್ರೀ ಎಸ್. ಶಿವಣ್ಣ
ಸಂಪಾದಕರು
ಕನ್ನಡ ಅಧ್ಯಯನ ಕೇಂದ್ರ
ಜ್ಞಾನಭಾರತಿ
ಬೆಂಗಳೂರು - 560 056

8. ಡಾ॥ ಸಿ. ಪಿ. ಕೃಷ್ಣಕುಮಾರ್
ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ
ಮೈಸೂರು - 570 006

9. ಶ್ರೀ ಕೆಳದಿ ಗುಂಡಾಜೋಯಿಸ್
ಗೌ॥ ನಿರ್ದೇಶಕರು
ಕೆಳದಿ ಮ್ಯೂಸಿಯಂ
ಕೆಳದಿ ಅಂಚೆ
ಸಾಗರ ತಾಲ್ಲೂಕು
ಶಿವಮೊಗ್ಗ ಜಿಲ್ಲೆ

# ಪ್ರತಿಷ್ಠಾನದ ಪ್ರಕಟಣೆಗಳು

1. ಮಣಿಹ (ಫ. ಗು. ಹಳಕಟ್ಟಿ ಸಂಸ್ಮರಣ ಸಂಪುಟ)
2. ಬೇಂದ್ರೆ ಸ್ಮೃತಿ (ಸಾಹಿತ್ಯ ಭಂಡಾರದಲ್ಲೂ ದೊರೆಯುತ್ತದೆ)
3. ಸರ್ವಜ್ಞ ವಚನಗಳು*
4. ಸೂತ ಭಾರತ*
5. ಶ್ರೀಕೃಷ್ಣದೇವರಾಯ ದಿನಚರಿ*
6. ಹಸ್ತಪ್ರತಿ ಶಾಸ್ತ್ರ*
7. ಮಾಸ್ತಿ ಸ್ಮರಣೆ
8. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ—ಭಾಗ–೧*

## ದತ್ತಿ ಉಪನ್ಯಾಸ ಮಾಲೆ

9. ಮೂರು ದತ್ತಿ ಉಪನ್ಯಾಸಗಳು
10. ವೈವಸ್ವತ ಮನು
11. ಸ್ವಾಯಂಭುವ ಮನು : ವೈವಸ್ವತ ಮನು – ತೌಲನಿಕ ಅಧ್ಯಯನ
12. ಮೂರು ದತ್ತಿ ಉಪನ್ಯಾಸಗಳು—೧೯೮೪
13. ದತ್ತಿ ಉಪನ್ಯಾಸಗಳು—೧೯೮೬

## ತಿಮ್ಮಪ್ಪದಾಸ ಪ್ರಕಾಶನ ಮಾಲೆ

14. ಕೀರ್ತನ ಕುಸುಮಾಂಜಲಿ
15. ಧ್ರುವ ಚರಿತ್ರೆ*
16. ಶ್ರೀ ಕೃಷ್ಣಬಾಲಲೀಲೆ ಭಾಗ–೧*
17. ,, ಭಾಗ–೨*

## ಶ್ರೀ ಜನ್ಮಶತಾಬ್ದಿ ಕೃತಿಮಾಲೆ

18. ಶ್ರೀವಾಣಿ (ಸೂಕ್ತಿ ಸಂಗ್ರಹ)
19. ಆಚಾರ್ಯ ಬಿ.ಎಂ.ಶ್ರೀ. (ಜೀವನ ಚಿತ್ರ)
20. ಕನ್ನಡ ಕಣ್ವ ಬಿ.ಎಂ.ಶ್ರೀ. (ಮಕ್ಕಳಿಗೆ)
21. ಶ್ರೀಯವರ ಆಯ್ದ ಕವನಗಳು
22. ಶ್ರೀನಿಧಿ (ಸಂಸ್ಮರಣ ಸಂಪುಟ)
23. B.M.S.: The Man and His Mission
24. ಶ್ರೀಗಂಧ (ಸಂಸ್ಮರಣ ಸಂಚಿಕೆ) 1
25. ಇಂಗ್ಲಿಷ್ ಗೀತಗಳು (ಆಂಗ್ಲ ಮೂಲ ಕವನಗಳೊಂದಿಗೆ) 2
26. The Improvement of Kannada—B.M.Sri.
27. ಪ್ರೊಫೆಸರ್ ಟಿ. ಎಸ್. ವೆಂಕಣ್ಣಯ್ಯ
28. ಭಾರತದ ಶ್ರೀಕೃಷ್ಣ 6
29. ಅಶ್ವತ್ಥಾಮ ('ಶ್ರೀ' ನಾಟಕದ ಸರಳಾನುವಾದ) 6
30. Early Vijayanagara : Studies in History & Culture 60.

* ಈ ಪುಸ್ತಕಗಳಿಗೆ ಪ್ರತಿಷ್ಠಾನದ ಸದಸ್ಯರಿಗೆ ಶೇ. 50 ರಿಯಾಯಿತಿ.